**ಲೋಕೋಪಯೋಗಿ ಇಲಾಖೆ**

**ಕಾರ್ಯಪಾಲಕ ಇಂಜಿನಿಯರ್ ರವರ ಕಛೇರಿ, ರಾಷ್ಟ್ರೀಯ ಹೆದ್ದಾರಿ ವಿಶೇಷ ವಿಭಾಗ, ನಿರ್ಮಾಣ ಭವನ, ಡಾ: ರಾಜಕುಮಾರ್ ರಸ್ತೆ, ರಾಜಾಜಿನಗರ, 1ನೇ ಬ್ಲಾಕ್, ಬೆಂಗಳೂರು**

**ಸಂಖ್ಯೆ:ಕಾಪಾಇಂ:ರಾಹೆವಿವಿ:ಬೆಂ:ಕಿಇಂ-1:ಆಕ್ಷನ್:2005-06/815-104, ದಿನಾಂಕ: 9ನೇ ಅಕ್ಟೋಬರ್ 2007**

**ಟೆಂಡರ್ ಕಮ್ ಬಹಿರಂಗ ಹರಾಜು ಪ್ರಕಟಣೆ : 01/2005-06**

ಸಾರ್ವಜನಿಕರಿಂದ ಟಾಟಾ ಟಿಪ್ಪರ್ ಸಂ: ಶೀಪ್ ಫುಟ್ ರೋಲರ್ ಅನ್ನು "ಎಲ್ಲಿ ಹೇಗಿದೆಯೋ ಅದೇ ಸ್ಥಿತಿಯಲ್ಲಿ" ಈ ಕೆಳಕಂಡ ಸ್ಥಳದಲ್ಲಿ ವಿಲೇವಾರಿ ಮಾಡಲು ಉದ್ದೇಶಿಸಲಾಗಿದೆ.

| ಕ್ರ. ಸಂ. | ಯಂತ್ರೋಪಕರಣಗಳ ವಿವರ | ಪರಿಮಾಣ | ನಿಗದಿಪಡಿಸಿದ ಮೌಲ್ಯ | ಹರಾಜಿನಲ್ಲಿ ಭಾಗವಹಿಸಿದವರು ಠೇವಣಿ ಮಾಡಬೇಕಾದ ಮೊತ್ತ (ಡಿಮ್ಯಾಂಡ್ ಡ್ರಾಫ್ಟ್ ಮಾತ್ರ) ರೂ.ಗಳಲ್ಲಿ | ಬಹಿರಂಗ ಹರಾಜು ಮಾಡಲಾಗುವ ದಿನಾಂಕ |
|---|---|---|---|---|---|
| 1. | ಶೀಪ್ ಫುಟ್ ರೋಲರ್ (ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ತುಮಕೂರು ಉಗ್ರಾಣ ಪ್ರಾಂಗಣದಲ್ಲಿ ಇರುವುದು) | ಒಂದು | ರಹಸ್ಯವಾಗಿ ಇಡಲಾಗಿದೆ | 5000-00 | 06.11.2007 ರಂದು ಅಪರಾಹ್ನ 12.00 ಗಂಟೆಗೆ ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಶೇಷ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ |
| 2. | ಡಿ.ಆರ್.ಆರ್. 5193 (ರಾಷ್ಟ್ರೀಯ ಹೆದ್ದಾರಿ ಉಪ ವಿಭಾಗ, ತುಮಕೂರು ಉಗ್ರಾಣ ಪ್ರಾಂಗಣದಲ್ಲಿ ಇರುವುದು) | ಒಂದು | ರಹಸ್ಯವಾಗಿ ಇಡಲಾಗಿದೆ | 5000-00 | 06.11.2007 ರಂದು ಅಪರಾಹ್ನ 12.00 ಗಂಟೆಗೆ ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಶೇಷ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ |

1. ಮೇಲೆ ತಿಳಿಸಿರುವ ದಿನಾಂಕಗಳಲ್ಲಿ ಯಾವುದಾದರೂ ಸಾರ್ವಜನಿಕ ರಜೆ ಆಗಿದ್ದಲ್ಲಿ ಮುಂದಿನ ಕೆಲಸದ ದಿನವು ಅನ್ವಯವಾಗುತ್ತದೆ. ಬಿಡ್ ಅನ್ನು ಅಂತಿಮವಾಗಿ ಒಪ್ಪುವ ಅಥವಾ ಯಾವುದೇ ಕಾರಣ ನೀಡದೇ ತಿರಸ್ಕರಿಸುವ ಅಧಿಕಾರವನ್ನು ಸಕ್ಷಮ ಪ್ರಾಧಿಕಾರ ಪಡೆದಿರುತ್ತದೆ.
2. ಬಹಿರಂಗ ಹರಾಜು ದಿ: 06.11.2007 ರಂದು ಅಪರಾಹ್ನ 12.00 ಗಂಟೆಗೆ ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಶೇಷ ವಿಭಾಗ/ ಬೆಂಗಳೂರು ಇವರ ಕಛೇರಿಯಲ್ಲಿ ನಡೆಯಲಿದ್ದು ಭಾಗವಹಿಸಲಿಚ್ಛಿಸುವ ಬಿಡ್‌ದಾರರು ನಿಗದಿತ ಠೇವಣಿಯನ್ನು ಪ್ರತಿಯೊಂದು ವಾಹನಕ್ಕೆ ಬೇರೆ ಬೇರೆಯಾಗಿ ಹರಾಜಿನ ಮೊದಲು ಸಂದಾಯ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು. ಯಶಸ್ವಿ ಬಿಡ್ಡುದಾರರು ಸ್ಥಳದಲ್ಲಿಯೇ ಪ್ರತಿಯೊಂದು ವಾಹನದ ಬಿಡ್ಡಿನ ಮೊತ್ತದ ಶೇ.50 ರಷ್ಟನ್ನು ಶೇ.12.50 ವ್ಯಾಟ್‌ನೊಂದಿಗೆ ಪಾವತಿಸತಕ್ಕದ್ದು, ತಪ್ಪಿದಲ್ಲಿ, ಠೇವಣಿ ಮೊಬಲಗನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಸಕ್ಷಮ ಪ್ರಾಧಿಕಾರದಿಂದ, ಬಹಿರಂಗ ಹರಾಜಿನಲ್ಲಿನ ಅತೀ ಹೆಚ್ಚಿನ ಬಿಡ್ಡು ದರದ ಮಂಜೂರಾತಿ ಪಡೆಯಲ್ಪಟ್ಟ ನಂತರ, ಯಶಸ್ವಿ ಬಿಡ್ಡುದಾರರು, ಬಾಕಿ ಉಳಿದ ಮೊತ್ತವನ್ನು ತೆರಿಗೆ ಸಹಿತ ಸಂದಾಯ ಮಾಡಿ ಸಂಬಂಧಿಸಿದ ವಾಹನಗಳನ್ನು ವಿಳಂಬ ಮಾಡದೇ 7 ದಿನಗಳ ಅವಧಿಯಲ್ಲಿ ಒಯ್ಯತಕ್ಕದ್ದು. ತಪ್ಪಿದಲ್ಲಿ ಅವರು ಶೇ 50 ರಷ್ಟು ತುಂಬಿದ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಎಕ್ಸೈಜ್ ಮತ್ತು ಕಸ್ಟಮ್ಸ್ ತೆರಿಗೆಗಳ ಪಾವತಿ ಯಶಸ್ವಿ ಬಿಡ್ಡುದಾರರ ಜವಾಬ್ದಾರಿಯಾಗಿರುತ್ತದೆ.
3. ಇ.ಎಂ.ಡಿ. (ಠೇವಣಿ) ಗಾಗಲೀ ಅಥವಾ ಬಿಡ್ಡುದಾರರು ತುಂಬಿದ ಶೇ 50 ರಷ್ಟು ಹಣಕ್ಕಾಗಲಿ ಬಡ್ಡಿಯನ್ನು ಕೊಡಲಾಗುವುದಿಲ್ಲ.
4. ಆಸಕ್ತಿಯುಳ್ಳ ಸಾರ್ವಜನಿಕರು ಸದರಿ ವಾಹನಗಳನ್ನು ಕಛೇರಿಯ ವೇಳೆಯಲ್ಲಿ ಸಂಬಂಧಿಸಿದ ರಾಷ್ಟ್ರೀಯ ಹೆದ್ದಾರಿ ಉಪವಿಭಾಗದ ನಿಗಧಿತ ಸ್ಥಳದಲ್ಲಿ ಪರಿಶೀಲಿಸಬಹುದು. ಆಸಕ್ತಿಯುಳ್ಳ ಸಾರ್ವಜನಿಕರು ವಾಹನಗಳ ಬಗ್ಗೆ ಇನ್ನೂ ಹೆಚ್ಚಿನ ವಿವರಗಳಿಗೆ ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿಗಳ ಉಪವಿಭಾಗ, ತುಮಕೂರು ಇವರನ್ನು ಸಂಪರ್ಕಿಸಬಹುದು. (ದೂರವಾಣಿ ಸಂ: ರಾ.ಹೆ ಉಪ ವಿಭಾಗ ತುಮಕೂರು- 0816-2278770)

ಕಾರ್ಯನಿರ್ವಾಹಕ ಇಂಜಿನಿಯರ್,
ರಾಷ್ಟ್ರೀಯ ಹೆದ್ದಾರಿ ವಿಶೇಷ ವಿಭಾಗ, ಬೆಂಗಳೂರು.

ಪಿ.ಆರ್. 649

**ಕಾರ್ಯನಿರ್ವಾಹಕ ನಿರ್ದೇಶಕರ ಕಛೇರಿ, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು-83**

**ಮರು ಹರಾಜು ಪ್ರಕಟಣೆ**

**ಸಂಖ್ಯೆ:ಎ2/ಬಬಪಾ/ವಾಹನ/ಜಿಎಲ್-1/2007-08, ದಿನಾಂಕ: 3ನೇ ಅಕ್ಟೋಬರ್ 2007**

**ವಿಷಯ:** ಅನುಪಯುಕ್ತ ವಾಹನವನ್ನು ಮರು ಹರಾಜು ಮಾಡುವ ಬಗ್ಗೆ.

ಸಮಸ್ತ ಸಾರ್ವಜನಿಕರಿಗೆ ಈ ಮೂಲಕ ತಿಳಿಸುವುದೇನೆಂದರೆ, ಈ ಕಛೇರಿಯಲ್ಲಿರುವ ಅನುಪಯುಕ್ತ ವಾಹನವನ್ನು ಈ ಕೆಳಗಿನ ತಪ್ಶೀಲು ರೀತ್ಯಾ ಸಾರ್ವಜನಿಕವಾಗಿ ಎಲ್ಲಿ ಹೇಗಿದೆಯೋ ಹಾಗೆಯೆ ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು ಅಥವಾ ಇವರಿಂದ ನಿಯೋಜಿಸಲ್ಪಟ್ಟ ಅಧಿಕಾರಿಗಳಿಂದ ಮರು ಹರಾಜು ಮೂಲಕ ವಿಲೇವಾರಿ ಮಾಡಲಾಗುವುದು.

**ತಪ್ಶೀಲು**

| ಕ್ರ. ಸಂ. | ವಾಹನದ ವಿವರ | ಹರಾಜಿನ ದಿನಾಂಕ ಮತ್ತು ಸಮಯ | ಹರಾಜು ಮಾಡುವ ಸ್ಥಳ |
|---|---|---|---|
| 1 | CAG 1249 DCM Toyota Year of manufactures: 1988 | ದಿನಾಂಕ:05.11.2007 ರಂದು ಮಧ್ಯಾಹ್ನ 3.00 ಗಂಟೆಗೆ | ಬನ್ನೇರುಘಟ್ಟ ಜೈವಿಕ ಉದ್ಯಾನವನದ ಆವರಣದಲ್ಲಿ |

**ಷರತ್ತುಗಳು:-**

1. ಹರಾಜಿನಲ್ಲಿ ಭಾಗವಹಿಸುವವರು ರೂ. 5,000/- ಇ.ಎಂ.ಡಿ ಅನ್ನು ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ ಬಯಲಾಜಿಕಲ್ ಪಾರ್ಕ್, ಬೆಂಗಳೂರು ಇವರ ಪದನಾಮಕ್ಕೆ ಡಿ.ಡಿ/ನಗದನ್ನು ಹರಾಜಿಗೆ ಮುನ್ನ ಸಲ್ಲಿಸಬೇಕು. ಸದರಿ ಇ.ಎಂ.ಡಿ. ಮೊತ್ತವನ್ನು ಹರಾಜಿನಲ್ಲಿ ಯಶಸ್ವಿ ಬಿಡ್ಡುದಾರರಾಗಿದ್ದಲ್ಲಿ ಬಿಡ್ ಮೊತ್ತಕ್ಕೆ ಸರಿಹೊಂದಿಸಿಕೊಳ್ಳಲಾಗುವುದು.
2. ಹರಾಜಿನಲ್ಲಿ ಯಶಸ್ವಿ ಬಿಡ್ಡುದಾರರಾಗದಿದ್ದಲ್ಲಿ ಸದರಿ ಇ.ಎಂ.ಡಿ. ಅನ್ನು ಹರಾಜಿನ ನಂತರ ಹಿಂತಿರುಗಿಸಲಾಗುವುದು.
3. ಹರಾಜಿನಲ್ಲಿ ಭಾಗವಹಿಸಲು ಇಚ್ಛೆಯುಳ್ಳವರು ಹರಾಜಿಗೆ ಮುನ್ನ ತಪ್ಶೀಲಿನಲ್ಲಿ ನಮೂದಿಸಿದ ಸ್ಥಳದಲ್ಲಿನ ವಾಹನವನ್ನು ಕೆಲಸದ ದಿನಾಂಕಗಳಂದು ಪರಿಶೀಲಿಸಿ ವಾಹನದ ಸ್ಥಿತಿಯ ಬಗ್ಗೆ ಖಾತ್ರಿಪಡಿಸಿಕೊಳ್ಳಬಹುದಾಗಿದೆ. ಹರಾಜಿನ ನಂತರ ಯಾವುದೇ ದೂರುಗಳನ್ನು ಪರಿಗಣಿಸಲಾಗುವುದಿಲ್ಲ.
4. ಯಶಸ್ವಿಯಾದ ಬಿಡ್ಡುದಾರನು ಹರಾಜು ಮುಗಿದ ತಕ್ಷಣ ಹರಾಜಿನ ಮೊತ್ತದ ಶೇ. 50% ಭಾಗ ಮತ್ತು ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳ ಸಹಿತ ಹಣವನ್ನು ಪಾವತಿಸಿ ರಶೀದಿಯನ್ನು ಪಡೆದುಕೊಳ್ಳತಕ್ಕದ್ದು. ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ಮೂಲ ಬಿಡ್ಡುದಾರರ ಜವಾಬ್ದಾರಿಯ ಮೇಲೆ ಮರು ಹರಾಜು ನಡೆಸಲಾಗುವುದು ಮತ್ತು ತಂತ್ಸಬಂಧ ಆಗುವ ಹಾನಿಗೆ ಮೂಲ ಬಿಡ್ಡುದಾರರೇ ಜವಾಬ್ದಾರರಾಗಿರುತ್ತಾರೆ.
5. ಹರಾಜಿನ ಸ್ಥಿರೀಕರಣವನ್ನು ಯಶಸ್ವಿ ಬಿಡ್ಡುದಾರನಿಗೆ ನೊಂದಣಿ ಅಂಚೆ ಮೂಲಕ ತಿಳಿಸಲಾಗುವುದು. ಯಶಸ್ವಿ ಬಿಡ್ಡುದಾರನು ಉಳಿದ ಶೇಕಡ 50% ರಷ್ಟು ಮೊತ್ತವನ್ನು 10 ದಿನದೊಳಗೆ ಪಾವತಿಸಿ ಸ್ವೀಕೃತಿ ಪಡೆದು ವಾಹನವನ್ನು ವಶಕ್ಕೆ ತೆಗೆದುಕೊಳ್ಳಲಾಗುವುದು.
6. ಹರಾಜನ್ನು ಅಂಗೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಕಾರ್ಯನಿರ್ವಾಹಕ ನಿರ್ದೇಶಕರಿಗೆ ಇರುತ್ತದೆ. ಯಾವುದೇ ಕಾರಣವನ್ನು ನೀಡದೆ ಸದರಿ ಅಧಿಕಾರಿಗಳು ಹರಾಜನ್ನು ತಿರಸ್ಕರಿಸಬಹುದಾಗಿರುತ್ತದೆ.
7. ವಾಹನದ ನೊಂದಣಿ ಯಶಸ್ವಿ ಬಿಡ್ಡುದಾರರ ಪೂರ್ಣ ಜವಾಬ್ದಾರಿಯಾಗಿರುತ್ತದೆ. ಆದಾಗ್ಯೂ ಈ ವಿಚಾರದಲ್ಲಿ ಅವಶ್ಯವಿರುವ ಸಹಕಾರವನ್ನು ಪ್ರಾಧಿಕಾರ ನೀಡಲಾಗುವುದು.
8. ಹರಾಜು ನಿಗಧಿಪಡಿಸಿದ ದಿನಾಂಕದಂದು ಸಾರ್ವತ್ರಿಕ ರಜೆಯಾದ ಪಕ್ಷದಲ್ಲಿ ಸದರಿ ಹರಾಜಿನ ದಿನವನ್ನು ಮುಂದಿನ ಕಛೇರಿಯ ಕೆಲಸದ ದಿನದಂದು ಅದೇ ಸಮಯ ಮತ್ತು ಅದೇ ಸ್ಥಳದಲ್ಲಿ ನಡೆಸಲಾಗುವುದು.

ಕಾರ್ಯನಿರ್ವಾಹಕ ನಿರ್ದೇಶಕರು, ಬನ್ನೇರುಘಟ್ಟ
ಪಿ.ಡಿ. 102 ಬಯಲಾಜಿಕಲ್ ಪಾರ್ಕ್, ಬೆಂಗಳೂರು-83

**ತೋಟಗಾರಿಕೆ ಇಲಾಖೆ**

**ತೋಟಗಾರಿಕೆ ಉಪ ನಿರ್ದೇಶಕರ ಕಛೇರಿ, ಕಬ್ಬನ್ ಉದ್ಯಾನವನ, ಬೆಂಗಳೂರು**

**ಟೆಂಡರ್ ಆಹ್ವಾನ ಪ್ರಕಟಣೆ**

**ಸಂಖ್ಯೆ:ತೋಉನಿ/ಕಉ/ವಿನಿ2/70/2007-08, ದಿನಾಂಕ: 17ನೇ ಸೆಪ್ಟೆಂಬರ್ 2007**

ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಇವರ ಕಛೇರಿ ಅಧೀನದಲ್ಲಿ ಬರುವ ಕಬ್ಬನ್ ಉದ್ಯಾನವನ ನರ್ಸರಿ, ಶೇಷಾದ್ರಿ ವಿಭಾಗ, ರಾಜಭವನ ಉದ್ಯಾನವನ, ವಿಧಾನಸೌಧ ಉದ್ಯಾನವನ, ಹಾಗೂ ಇಂದಿರಾಗಾಂಧಿ ಸಂಗೀತ ಕಾರಂಜಿ ವಿಭಾಗ, ಕುಮಾರಕೃಪ ಹಾಗೂ ಬಾಲಬ್ರೂಹಿ ವಿಭಾಗದ ಉದ್ಯಾನವನಗಳಲ್ಲಿ ಹಾಲಿ ಇರುವ ಕೊಳವೆ ಬಾವಿಗಳು, ತೆರೆದ ಬಾವಿಗಳ ಮೂಲಕ ವಿವಿಧ ಉದ್ಯಾನವನದ ನಿರ್ವಹಣೆಗೆ ನೀರು ಸರಬರಾಜು ಮಾಡಲು ಕೆಳಕಂಡ ವಿದ್ಯುತ್‌ಚ್ಛಕ್ತಿ ಮೋಟಾರ್, ಲಾನ್‌ಮೂವರ್ ಮೋಟಾರ್, ಮತ್ತು ಸ್ಪ್ರಿಂಕಲರ್‌ಗಳನ್ನು ದುರಸ್ತಿ ಮತ್ತು ನಿರ್ವಹಣೆಯನ್ನು ಗುತ್ತಿಗೆ ಆಧಾರದ ಮೇಲೆ ಆದೇಶ ನೀಡಿದ ದಿನಾಂಕದಿಂದ ಒಂದು ವರ್ಷ ಅವಧಿಗೆ ವಾರ್ಷಿಕ ನಿರ್ವಹಿಸಲು ಕ್ಲಾಸ್-1 ವಿದ್ಯುತ್ ಗುತ್ತಿಗೆದಾರರಿಂದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಆಸಕ್ತಿಯುಳ್ಳ ಗುತ್ತಿಗೆದಾರರು ನಿಗಧಿತ ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದ ಖರೀದಿಸಿ ಗುತ್ತಿಗೆ ಕೆಲಸಕ್ಕೆ ತಮ್ಮ ಕನಿಷ್ಠ ದರಗಳನ್ನು ನಮೂದಿಸಿ ಟೆಂಡರ್‌ಗಳನ್ನು ಮೊಹರು ಮಾಡಿದ ಲಕೋಟೆಯಲ್ಲಿ "ಕಬ್ಬನ್ ಉದ್ಯಾನವನ ಅಧೀನ ವಿದ್ಯುತ್ ಮೋಟರ್ ಹಾಗೂ ಕಾರಂಜಿಗಳ ನಿರ್ವಹಣೆಗೆ ಟೆಂಡರ್" ಎಂದು ನಮೂದಿಸಿ ದಿನಾಂಕ:23.10.2007 ರೊಳಗೆ ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ತಲುಪುವಂತೆ ಆಸಕ್ತಿ ಇದ್ದವರು ಸಲ್ಲಿಸಬಹುದಾಗಿದೆ.

-:ವಿವಿಧ ವಿಭಾಗಗಳಲ್ಲಿ ನಿರ್ವಹಿಸಬೇಕಾದ ಕೆಲಸಗಳ ವಿವರ:-

| ಕ್ರ. ಸಂ. | ವಿದ್ಯುತ್ ಮೋಟಾರ್ ಮತ್ತು ಪಂಪ್‌ಸೆಟ್ ಮತ್ತು ಕಾರಂಜಿಯ ವಿವರ | ಪಂಪ್‌ಸೆಟ್ ಕೊಳವೆ ಬಾವಿ, ತೆರೆದ ಬಾವಿ ಇರುವ ಸಂಖ್ಯೆ |
|---|---|---|
| 1. | **ಎ) ಕಬ್ಬನ್ ಉದ್ಯಾನವನ ನರ್ಸರಿ:-** | |
| | 1. 1 ಹೆಚ್‌ಪಿ ಕ್ರಾಮಟನ್ ಮೋನೋಬ್ಲಾಕ್ ಪಂಪ್‌ಸೆಟ್ | 1 ಸಂಖ್ಯೆ |
| | 2. 1 ಹೆಚ್‌ಪಿ ಸುಗುಣ ಮೋನೋಬ್ಲಾಕ್ | 1 ಸಂಖ್ಯೆ |
| | 3. 1 ಹೆಚ್‌ಪಿ ಟೆಕ್ಸ್‌ಮೊ ಮೋನೋಬ್ಲಾಕ್ | 1 ಸಂಖ್ಯೆ |
| | 4. 3 ಹೆಚ್‌ಪಿ 17 ಸ್ಟೇಜ್ ಅಟ್ಲಾಂಟಾ ಸಬ್ ಮರ್ಸಿಬಲ್‌ಪಂಪ್ | 1 ಸಂಖ್ಯೆ |
| | 5. 5 ಹೆಚ್‌ಪಿ ಲಾನ್‌ಮೂವರ್ಸ್ | 1 ಸಂಖ್ಯೆ |
| | 6. 3 ಹೆಚ್‌ಪಿ ಟೆಕ್‌ಮೊ ಮೋನೋಬ್ಲಾಕ್ ಪಂಪ್‌ಸೆಟ್ (ರಾಣಿ ಪಾರ್ಕ್‌ನಲ್ಲಿನ) | 1 ಸಂಖ್ಯೆ |
| | 7. 2 ಹೆಚ್‌ಪಿ ಲಾನ್‌ಮೂವರ್ | 2 ಸಂಖ್ಯೆ |
| | 8. ಪೈಪ್‌ಲೈನ್ಸ್ ಗೇಜ್ ವಾಲ್ವ್ಸ್, ಸ್ಟಾಟರ್ಸ್, ಪ್ಲಂಬಿಂಗ್ ವರ್ಕ್ ಕೇಬಲ್ ರಿಪೇರಿ ಇತ್ಯಾದಿ | |
| | 9. ಉಪ ನಿರ್ದೇಶಕರ ಕೊಠಡಿ, ಸಹಾಯಕ ತೋಟಗಾರಿಕೆ ಅಧಿಕಾರಿ ಕಬ್ಬನ್ ಪಾರ್ಕ್‌ರವರ ಕೊಠಡಿಯಲ್ಲಿರುವ ಹಾಗೂ ಕಛೇರಿಯಲ್ಲಿರುವ ಟ್ಯೂಬುಲೈಟ್‌ಗಳು, ಚೌಕಗಳು, ಸ್ಟಾಟರ್‌ಗಳು ಮತ್ತು ಪ್ಯಾನ್‌ಗಳ ದುರಸ್ತಿ ಹಾಗೂ ನಿರ್ವಹಣೆ | |
| | 10. 2 ಹೆಚ್‌ಪಿ ಲಾನ್ ಮೂವರ್ 3 ಪೇಸ್ | 1 ಸಂಖ್ಯೆ |
| | 11. ಬ್ರಶ್ ಕಟರ್ | 1 ಸಂಖ್ಯೆ |
| 2. | **ಕಂಠೀರವ ಕ್ರೀಡಾಂಗಣ:-** | |
| | 1. 30 ಹೆಚ್‌ಪಿ ಕಿರ್ಲೋಸ್ಕರ್ ಮೋಟಾರ್ ಪಂಪ್‌ಸೆಟ್ | 1 ಸಂಖ್ಯೆ |
| | 2. 30 ಹೆಚ್‌ಪಿ ಎನ್.ಜಿ.ಇ.ಎಫ್. ಮೋಟಾರ್ ಪಂಪ್‌ಸೆಟ್ | 1 ಸಂಖ್ಯೆ |
| | 3. 5 ಹೆಚ್‌ಪಿ ಸಬ್‌ಮರ್ಸಿಬಲ್ ಪಂಪ್‌ಸೆಟ್ ಮತ್ತು ಪ್ಯಾನೆಲ್ ಬೋರ್ಡ್ಸ್ | 3 ಸಂಖ್ಯೆ |
| | 4. 30 ಹೆಚ್‌ಪಿ ಸ್ಟಾಟರ್ಸ್, ಮೈನ್ ಸ್ವಿಚಸ್ ಇತ್ಯಾದಿ | 2 ಸೆಟ್ |
| 3. | **ಮಹಾರಾಜ ಪ್ರತಿಮೆ ಕಾರಂಜಿ:-** | |
| | 1. 10 ಹೆಚ್‌ಪಿ ಸೋನಾ ಓಪನ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 2. 1 ಹೆಚ್‌ಪಿ ಸುಗುಣ ಮೋನೋಬ್ಲಾಕ್ ಪಂಪ್‌ಸೆಟ್ (ಹೈಕೋರ್ಟ್ ಗಾರ್ಡನ್ ಬಳಿ) | 1 ಸಂಖ್ಯೆ |
| | 3. 1 ಹೆಚ್‌ಪಿ ಕ್ರಾಮ್‌ಟನ್ ಮೋನೋಬ್ಲಾಕ್ ಪಂಪ್‌ಸೆಟ್ (ಹೈಕೋರ್ಟ್ ಗಾರ್ಡನ್ ಬಳಿ) | 1 ಸಂಖ್ಯೆ |
| | 4. ಪೈಪ್‌ಲೈನ್, ಗೇಟ್‌ವಾಲ್ಸ್ ಇತ್ಯಾದಿ | 1 ಸಂಖ್ಯೆ |
| | 5. 3 ಹೆಚ್‌ಪಿ ಓಪನ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್ (ಟೆರಸ್ ಗಾರ್ಡನ್) | |
| | 6. ಬ್ಯಾಂಡ್ ಸ್ಟ್ಯಾಂಡ್ ಪ್ರದೇಶದಲ್ಲಿ | |
| | 1. ಫೆರಿ ಕಾರಂಜಿ, ಪಂಪ್‌ಸೆಟ್ ಮೋಟಾರ್ | 1 ಸಂಖ್ಯೆ |
| | 2. ರಾಣಿಪಾರ್ಕ್ ಕಾರಂಜಿ ಪಂಪ್‌ಸೆಟ್ ಮೋಟಾರ್ | 1 ಸಂಖ್ಯೆ |
| 4. | **ಶೇಷಾದ್ರಿ ವಿಭಾಗಗಳು:** | |
| | 1. ಬಾವಿ ನಂ. 1-10 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ (ಪ್ಯಾನಲ್ ಬೋರ್ಡ್) | 1 ಸಂಖ್ಯೆ |
| | 2. ಬಾವಿ ನಂ. 2-5 ಹೆಚ್‌ಪಿ ಕ್ರಾಮ್‌ಟನ್ ಕಪಲ್ಡ್ ಪಂಪ್‌ಸೆಟ್ ಮತ್ತು ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 3. ಬಾವಿ ನಂ. 3-10 ಹೆಚ್‌ಪಿ ಕಿರ್ಲೋಸ್ಕರ್ ಕಪಲ್ಡ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 4. ಬಾವಿ ನಂ. 6-5 ಹೆಚ್‌ಪಿ ಕ್ರಾಂಪ್ಟನ್ ಕಪಲ್ಡ್ ಪಂಪ್‌ಸೆಟ್ ವಿತ್ ಸ್ಟಾರ್ಟರ್ | 1 ಸಂಖ್ಯೆ |

| ಕ್ರ. ಸಂ. | ವಿದ್ಯುತ್ ಮೋಟಾರ್ ಮತ್ತು ಪಂಪ್‌ಸೆಟ್ ಮತ್ತು ಕಾರಂಜಿಯ ವಿವರ | ಪಂಪ್‌ಸೆಟ್ ಕೊಳವೆ ಬಾವಿ, ತೆರೆದ ಬಾವಿ ಇರುವ ಸಂಖ್ಯೆ |
|---|---|---|
| | 5. ಬಾವಿ ನಂ. 7, 5 ಹೆಚ್‌ಪಿ ಕ್ರಾಂಪ್ಟನ್ ಕಪಲ್ಡ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 6. ಬೋರ್‌ವೆಲ್ ನಂ. 1,2 ಮತ್ತು 3-6 ಹೆಚ್‌ಪಿ 17 ಸ್ಟೇಜ್ ಅಟ್ಲಾಂಟಾ ಸಬ್ ಮರ್ಸಿಬಲ್ ಪಂಪ್‌ಸೆಟ್ | 3 ಸಂಖ್ಯೆ |
| | 7. 2 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 8. 1 ಹೆಚ್‌ಪಿ.ಸಿ.ಆರ್.ಐ. ಮೋನೋಬ್ಲಾಕ್ ಪಂಪ್‌ಸೆಟ್ | 1 ಸಂಖ್ಯೆ |
| | 9. ಸ್ಪಿಂಕಲರ್ಸ್ ಗೇಟ್ ವಾಲ್, ಪ್ಲಂಬಿಂಗ್ ವರ್ಕ್ ಇತ್ಯಾದಿ | ---- |
| | 10. 5 ಹೆಚ್‌ಪಿ 3 ಫೇಸ್ ಮೋಟಾರ್, | 1 ಸಂಖ್ಯೆ |
| | 11. 2 ಹೆಚ್‌ಪಿ 3 ಫೇಸ್ ಮೋಟಾರ್ | 1 ಸಂಖ್ಯೆ |
| **5.** | **ಮಕ್ಕಳ ಗ್ರಂಥಾಲಯ:-** | |
| | 1. 5 ಹೆಚ್‌ಪಿ ಪಂಪ್‌ಸೆಟ್ ವಿತ್ ಪ್ಯಾನೆಲ್ ಬೋರ್ಡ್ | 1 ಸಂಖ್ಯೆ |
| | 2. ಪೈಪ್‌ಲೈನ್ ಗೇಟ್‌ವಾಲ್ಸ್ ಇತ್ಯಾದಿ | ---- |
| **6.** | **ರೋಸ್ ಗಾರ್ಡನ್:-** | |
| | 1. 7.5 ಹೆಚ್‌ಪಿ ಕಿರ್ಲೋಸ್ಕರ್ ಮೋನೋಬ್ಲಾಕ್ ಪಂಪ್‌ಸೆಟ್ | 1 ಸಂಖ್ಯೆ |
| | 2. 7.5 ಹೆಚ್‌ಪಿ ಅಟ್ಲಾಂಟ ಸಬ್ ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ (ಗ್ರಂಥಾಲಯದ ಬಳಿ, ವಿಧಾನಸೌಧ ನರ್ಸರಿಯವರು ಉಪಯೋಗಿಸಿರುತ್ತಾರೆ) | 1 ಸಂಖ್ಯೆ |
| | 3. ಪೈಪ್‌ಲೈನ್ ಗೇಟ್ ವಾಲ್ಸ್ ಪಂಬ್ಲಿಂಗ್ ವರ್ಕ್ ಇತ್ಯಾದಿ | ---- |
| **7.** | **ಗೋಪಾಲಗೌಡ ಕಾರಂಜಿ:-** | |
| | 1. 10 ಹೆಚ್‌ಪಿ ಸೋನ ಓಪನ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 2. 7.5 ಹೆಚ್‌ಪಿ ಸೋನ ಓಪನ್ ಸಬ್ ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನೆಲ್ | 2 ಸಂಖ್ಯೆ |
| | 3. 20 ಹೆಚ್‌ಪಿ ಕ್ರಾಂಪ್ಟನ್ ಕಪಲ್ಡ್ ಮೋಟಾರ್ ವಿತ್ ಸ್ಟಾರ್ಟರ್ (ಸ್ಟೇಜ್ ಪಂಪ್) ವಿಧಾನಸೌಧ ನರ್ಸರಿಯವರು ಉಪಯೋಗಿಸುತ್ತಿದ್ದಾರೆ) | 15 ಸಂಖ್ಯೆ |
| | 4. ಲೈಟ್ಸ್ (ಕಾರಂಜಿ) | |
| **8.** | **ವಿಧಾನಸೌಧ ನರ್ಸರಿ:-** | |
| | 1. 15 ಹೆಚ್‌ಪಿ ಎ.ಇ.ಐ. ಕಪಲ್ಡ್ ಮೋಟಾರ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 2 ಸಂಖ್ಯೆ |
| | 2. 3 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ ವಿತ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 3. 15 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ ವಿತ್ ಸ್ಟಾರ್ಟರ್ (ವಿಧಾನಸೌಧ ಪಂಪ್‌ಹೌಸ್) | 1 ಸಂಖ್ಯೆ |
| | 4. 10 ಹೆಚ್‌ಪಿ ಬಿಕಾನ್ ಮೋನೋಬ್ಲಾಕ್ ಪಂಪ್‌ಸೆಟ್ (ವಿಧಾನಸೌಧ ಪಂಪ್‌ಹೌಸ್) | 1 ಸಂಖ್ಯೆ |
| | 5. 2 ಹೆಚ್‌ಪಿ ಲಾನ್‌ಮೂವರ್ ಮೋಟಾರ್ | 2 ಸಂಖ್ಯೆ |
| | 6. 1 ಹೆಚ್‌ಪಿ ಲಾನ್‌ಮೂವರ್ ಮೋಟಾರ್ | 1 ಸಂಖ್ಯೆ |
| | 7. 2 ಹೆಚ್‌ಪಿ ಮೋನೋಬ್ಲಾಕ್ | 1 ಸಂಖ್ಯೆ |
| | 8. 3 ಹೆಚ್‌ಪಿ ಸುಗಣ ಮೋನೋಬ್ಲಾಕ್ ವಿತ್ ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 9. ಸ್ಪಿಂಕಲರ್ಸ್, ಪೈಪ್‌ಲೈನ್ ಗೇಟ್‌ವಾಲ್ಸ್ ಇತ್ಯಾದಿ | --- |
| | 10. ಬ್ರಶ್ ಕಟರ್ | 1 ಸಂಖ್ಯೆ |
| | 11. 2 ಹೆಚ್‌ಪಿ 3 ಫೇಸ್ ಮೋಟಾರ್ | 1 ಸಂಖ್ಯೆ |
| **9.** | **ರಾಜಭವನ:-** | |
| | 1. 5 ಹೆಚ್‌ಪಿ ಕೆ.ಎಸ್.ಬಿ. ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್‌ಬೋರ್ಡ್ | 1 ಸಂಖ್ಯೆ |

| ಕ್ರ. ಸಂ. | ವಿದ್ಯುತ್ ಮೋಟಾರ್ ಮತ್ತು ಪಂಪ್‌ಸೆಟ್ ಮತ್ತು ಕಾರಂಜಿಯ ವಿವರ | ಪಂಪ್‌ಸೆಟ್ ಕೊಳವೆ ಬಾವಿ, ತೆರೆದ ಬಾವಿ ಇರುವ ಸಂಖ್ಯೆ |
|---|---|---|
| | 2. 5 ಹೆಚ್‌ಪಿ ಅಟ್ಲಾಂಟ್ ಸಬ್‌ಮರ್ಸಿಬಲ್ ಪಂಪ್‌ಸೆಟ್ ವಿತ್ ಪ್ಯಾನಲ್‌ಬೋರ್ಡ್ | 1 ಸಂಖ್ಯೆ |
| | 3. 10 ಹೆಚ್‌ಪಿ ಕಿರ್ಲೋಸ್ಕರ್ ಕಪಲ್ಡ್ ಪಂಪ್‌ಸೆಟ್ ವಿತ್ ಪ್ಯಾನಲ್‌ಬೋರ್ಡ್ | 1 ಸಂಖ್ಯೆ |
| | 4. 10 ಹೆಚ್‌ಪಿ ಎನ್.ಜಿ.ಇ.ಎಫ್. ಮೋನೋಬ್ಲಾಕ್ ಪಂಪ್‌ಸೆಟ್ ವಿತ್ ಪ್ಯಾನಲ್‌ಬೋರ್ಡ್ | 2 ಸಂಖ್ಯೆ |
| | 5. 1 ಹೆಚ್‌ಪಿ ಮೋನೋಬ್ಲಾಕ್ ಪಂಪ್‌ಸೆಟ್ | 2 ಸಂಖ್ಯೆ |
| | 6. 2 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 7. 1 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 8. ಪೈಪ್‌ಲೈನ್ಸ್ ಸ್ಪಿಂಕಲರ್ಸ್ ಪ್ಲಂಬಿಂಗ್ ವರ್ಕ್ ಇತ್ಯಾದಿ | ---- |
| **10.** | **ಇಂದಿರಾಗಾಂಧಿ ಸಂಗೀತ ಕಾರಂಜಿ ವಿಭಾಗ:-** | |
| | 1. 3 ಹೆಚ್‌ಪಿ ಕಂಪ್ರೆಸರ್ ವಿತ್ ಸ್ಟಾರ್ಟರ್ (ಬೋರ್‌ವೆಲ್) | 4 ಸಂಖ್ಯೆ |
| | 2. 3 ಹೆಚ್‌ಪಿ ಟೆಕ್ಸ್‌ಮೊ ಮೋನೋಬ್ಲಾಕ್ ವಿತ್ ಸ್ಟಾರ್ಟರ್ಸ್ | 2 ಸಂಖ್ಯೆ |
| | 3. 1/2 ಹೆಚ್‌ಪಿ ಮೋನೋಬ್ಲಾಕ್ | 1 ಸಂಖ್ಯೆ |
| | 4. 2 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 5. 1 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 6. ಪೈಪ್ ಲೈನ್ಸ್ ಗೇಟ್‌ವಾಲ್ಸ್, ಪ್ಲಂಬಿಂಗ್ ವರ್ಕ್ ಇತ್ಯಾದಿ | ---- |
| | 7. 2 ಹೆಚ್‌ಪಿ 3 ಫೇಸ್ ಮೋಟಾರ್ | 1 ಸಂಖ್ಯೆ |
| **11.** | **ಕುಮಾರಕೃಪಾ ವಿಭಾಗ:-** | |
| | 1. 1 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 2. 2 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 3. 2 ಹೆಚ್‌ಪಿ ಮೋನೋಬ್ಲಾಕ್ | 1 ಸಂಖ್ಯೆ |
| | 4. 1 ಹೆಚ್‌ಪಿ ಮೋನೋಬ್ಲಾಕ್ | 1 ಸಂಖ್ಯೆ |
| | 5. 2 ಹೆಚ್‌ಪಿ ಸಿಂಗಲ್ ಫೇಸ್ ಮೋಟಾರ್ | 1 ಸಂಖ್ಯೆ |
| **12.** | **ಬಾಲಬ್ರೂಯಿ ವಿಭಾಗ:-** | |
| | 1. 2 ಹೆಚ್‌ಪಿ ಲಾನ್‌ಮೂವರ್ | 2 ಸಂಖ್ಯೆ |
| | 2. 1 ಹೆಚ್‌ಪಿ ಲಾನ್‌ಮೂವರ್ | 1 ಸಂಖ್ಯೆ |
| | 3. ಸ್ಟಾಟರ್ಸ್ | -- |
| | 4. ಪೈಪ್‌ಲೈನ್ ಇತ್ಯಾದಿ | -- |
| **13.** | **ಆಸ್ಪತ್ರೆ ವಿಭಾಗ: (ವಾಣಿ ವಿಲಾಸ್ ಗಾರ್ಡನ್):-** | |
| | 1. 2 ಹೆಚ್‌ಪಿ ಲಾನ್‌ಮೂವರ್ ಮೋಟಾರ್ ವಿತ್ ಸ್ಟಾಟರ್ಸ್ | 1 ಸಂಖ್ಯೆ |
| | 2. 2 ಹೆಚ್‌ಪಿ 3 ಫೇಸ್ ಮೋಟಾರ್ | 1 ಸಂಖ್ಯೆ |
| **14.** | **ವಿಕಾಸ ಸೌಧ ವಿಭಾಗ:-** | |
| | 1. 5 ಹೆಚ್‌ಪಿ ಕಿರ್ಲೋಸ್ಕರ್ ಓಪಲ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್, ಪ್ಯಾನಲ್‌ಬೋರ್ಡ್, | 1 ಸಂಖ್ಯೆ |
| | 2. 3 ಹೆಚ್‌ಪಿ ಟೈಕ್ಸ್‌ಮೋ ಓಪಲ್‌ವೆಲ್ ಸಬ್‌ಮರ್ಸಿಬಲ್ ಪಂಪ್‌ಸೆಟ್, ಪ್ಯಾನಲ್ ಬೋರ್ಡ್ | 1 ಸಂಖ್ಯೆ |
| | 3. ಪೈಪ್‌ಲೈನ್, ಸ್ಪಿಂಕ್ಲರ್ಸ್ | -- |

**ಗುತ್ತಿಗೆದಾರರಿಗೆ ಷರತ್ತುಗಳು ಹಾಗೂ ನಿಬಂಧನೆಗಳು:-**

1. ನಿಗದಿತ ಟೆಂಡರ್ ಫಾರಂಗಳನ್ನು ದಿನಾಂಕ:18.10.2007 ರಿಂದ 22.10.2007 ರವರೆಗೆ ಈ ಕಛೇರಿಯಿಂದ ರೂ. 500.00 ಪಾವತಿಸಿ ಪಡೆದುಕೊಳ್ಳಬಹುದು ಹಾಗೂ ಭರ್ತಿ ಮಾಡಿದ ಟೆಂಡರ್‌ಗಳನ್ನು ದಿನಾಂಕ:23.10.2007 ರಂದು ಸಂಜೆ 4.00 ಗಂಟೆಯೊಳಗೆ ಈ ಕಛೇರಿಗೆ ಸಲ್ಲಿಸಬೇಕು. ಹಾಗೂ ಬಂದಿರುವ ಟೆಂಡರ್‌ಗಳನ್ನು ಸ್ಥಳದಲ್ಲೇ ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ಅದೇ ದಿನ ಸಂಜೆ 5.00 ಗಂಟೆಗೆ ತೆರೆಯಲಾಗುವುದು.
2. ಟೆಂಡರ್ ಕರೆಯಲಾದ ಗುತ್ತಿಗೆ ಕೆಲಸಗಳನ್ನು ನಿರ್ವಹಿಸಲು ವಿದ್ಯುಚ್ಛಕ್ತಿ ಇಲಾಖೆಯಿಂದ ಪರವಾನಗಿ ಪಡೆದಿರುವ ಕ್ಲಾಸ್-1 ವಿದ್ಯುಚ್ಛಕ್ತಿ ಗುತ್ತಿಗೆದಾರರು ಮಾತ್ರ ಟೆಂಡರ್‌ಗಳನ್ನು ಮೇಲಿನ ಕೆಲಸಗಳಿಗೆ ಸಲ್ಲಿಸಲು ಅರ್ಹರಾಗಿರುತ್ತಾರೆ. ಹಾಗೂ ಟೆಂಡರ್‌ನ ಜೊತೆಗೆ ಕಾರ್ಮಿಕ ಇಲಾಖೆ ಅನುಮತಿ ಪತ್ರ 2006-07ನೇ ಸಾಲಿಗೆ ಆದಾಯ ತೆರಿಗೆ ದೃಢೀಕರಣ ಪತ್ರ ಸಲ್ಲಿಸಬೇಕು.

2005-06 ಹಾಗೂ 2006-07ನೇ ಸಾಲಿನಲ್ಲಿ ಪ್ರತಿಷ್ಠಿತ ಸಂಸ್ಥೆಗಳಲ್ಲಿ/ ಇಲಾಖೆಗಳಲ್ಲಿ ವಿದ್ಯುಚ್ಛಕ್ತಿ ಕೆಲಸ ನಿರ್ವಹಿಸಿರುವ ಅನುಭವ ದೃಢೀಕರಣಪತ್ರ ಲಗತ್ತಿಸಬೇಕು.

3. ಟೆಂಡರ್‌ಅನ್ನು ಸಲ್ಲಿಸುವಾಗ ಇ.ಎಂ.ಡಿ. ಹಣ ರೂ. 25,000.00 ಗಳಿಗೆ ಬ್ಯಾಂಕ್ ಡ್ರಾಫ್ಟ್‌ಗಳನ್ನು ಯಾವುದಾದರೂ ರಾಷ್ಟ್ರೀಕೃತ ಬ್ಯಾಂಕಿನಿಂದ ಸದಸ್ಯ ಕಾರ್ಯದರ್ಶಿಗಳು "ಸುವರ್ಣ ಕರ್ನಾಟಕ ಉದ್ಯಾನವನಗಳ ಪ್ರತಿಷ್ಠಾನ" ಲಾಲ್‌ಬಾಗ್ ಬೆಂಗಳೂರು ಇವರಿಗೆ ಪಾವತಿಯಾಗುವಂತೆ ಪಡೆದು ಲಗತ್ತಿಸಿರಬೇಕು. ಹಾಗೂ ಟೆಂಡರ್ ತೆಗೆಯುವ ಮೊದಲು ಬ್ಯಾಂಕ್ ಡ್ರಾಫ್ಟ್‌ನ ಜೆರಾಕ್ಸ್ ಪ್ರತಿಯನ್ನು ತೋರಿಸಬೇಕು.
4. ಯಶಸ್ವಿ ಗುತ್ತಿಗೆದಾರರ ಠೇವಣಿ ಹಣವನ್ನು ಬಿಟ್ಟು ಮಿಕ್ಕ ಎಲ್ಲಾ ಟೆಂಡರ್‌ದಾರರ ಠೇವಣಿ ಹಣವನ್ನು ಟೆಂಡರ್ ಕರೆಯಲಾದ ದಿನವೇ ಹಿಂದಿರುಗಿಸಲಾಗುತ್ತದೆ. ಯಶಸ್ವಿ ಗುತ್ತಿಗೆದಾರರ ಠೇವಣಿ ಹಣವನ್ನು ಮಾತ್ರ ಗುತ್ತಿಗೆ ಅವಧಿ ಮುಗಿದ ಮೇಲೆ ಸಂಬಂಧಿಸಿದ ವಿಭಾಗಾಧಿಕಾರಿಗಳ ತೃಪ್ತಿಕರ ನಿರ್ವಹಣೆಯ ದೃಢೀಕರಣ ಪತ್ರ ಪಡೆದ ನಂತರ ಹಿಂದಿರುಗಿಸಲಾಗುತ್ತದೆ.
5. ಯಶಸ್ವಿ ಗುತ್ತಿಗೆದಾರರು ಗುತ್ತಿಗೆ ಕೆಲಸವನ್ನು ನಿರ್ವಹಿಸುವ ಮೊದಲು ಟೆಂಡರ್ ಷರತ್ತುಗಳಿಗೆ ಹಾಗೂ ನಿಭಂಧನೆಗಳಿಗೆ ಪೂರ್ಣವಾಗಿ ಬದ್ಧರಾಗಿರುತ್ತೇನೆ. ಎಂದು ರೂ. 200.00 ಗಳ ಛಾಪಾ ಕಾಗದದ ಮೇಲೆ ಕರಾರನ್ನು ಬರೆದು ನೋಟರಿ ಮಾಡಿಸಿ ಈ ಕಛೇರಿಗೆ ಸಲ್ಲಿಸಬೇಕು.
6. ಈ ಕಛೇರಿಯಿಂದ ನೀಡಲಾದ ನಿಗಧಿತ ಟೆಂಡರ್ ನಮೂನೆಯಲ್ಲಿ ಸಲ್ಲಿಸಿದ ಟೆಂಡರ್‌ಗಳನ್ನು ಮಾತ್ರ ಅಂಗೀಕರಿಸಲಾಗುವುದು ಹಾಗೂ ಅವಧಿ ಮೀರಿದ ಟೆಂಡರ್‌ಗಳನ್ನು ಪರಿಗಣಿಸಲಾಗುವುದಿಲ್ಲ.
7. ಗುತ್ತಿಗೆ ಕೆಲಸಕ್ಕೆ ಪ್ರತಿ ಮಾಹೆಯಲ್ಲಿ ನಿರ್ವಹಣೆ ಮಾಡಿದ ಕೆಲಸ ತೃಪ್ತಿಕರವಾಗಿರುವ ಬಗ್ಗೆ ಸಂಬಂಧಿಸಿದ ಅಧಿಕಾರಿಗಳ ದೃಢೀಕರಣ ಪಡೆದ ನಂತರ ಹಣ ಪಾವತಿಸಲು ಕ್ರಮ ಕೈಗೊಳ್ಳಲಾಗುತ್ತದೆ. ಹಣ ಪಾವತಿಸುವಾಗ ನಿಯಮದಂತೆ ಅನ್ವಯವಾಗುವ ತೆರಿಗೆಗಳನ್ನು ಬಿಲ್ಲಿನ ಮೂಲದಲ್ಲಿ ಕಡಿತಗೊಳಿಸಲಾಗುವುದು ಠೇವಣಿ ಹಣಕ್ಕೆ ಯಾವುದೇ ಬಡ್ಡಿ ನೀಡಿರುವುದಿಲ್ಲ ಹಾಗೂ ಈ ಸಂಬಂಧ ಇಲಾಖೆಗೆ ನೀಡಿದ ಬ್ಯಾಂಕ್ ಡ್ರಾಫ್ಟ್‌ನ್ನು ಆರು ತಿಂಗಳ ನಂತರ ಅವಧಿಯಲ್ಲಿ ಗುತ್ತಿಗೆದಾರರ ಖರ್ಚಿನಿಂದ ನವೀಕರಣ ಮಾಡಿಸಿಕೊಡಬೇಕು.
8. ಪಾಲುದಾರ ಸಂಸ್ಥೆಯಿಂದ ಟೆಂಡರ್ ಸಲ್ಲಿಸಿದ್ದಲ್ಲಿ ಪಾಲುದಾರಿಕೆ ಬಗ್ಗೆ ಟೆಂಡರ್ ಸಲ್ಲಿಸುವ ಮೊದಲೇ ನೊಂದಾವಣಿ ಮಾಡಿಸಿರುವ ಪ್ರತಿ ಲಗತ್ತಿಸಿರಬೇಕು.
9. ಗುತ್ತಿಗೆ ಕೆಲಸವನ್ನು ಸರಿಯಾಗಿ ನಿರ್ವಹಿಸದಿದ್ದ ಪಕ್ಷದಲ್ಲಿ ಮೊದಲ ಬಾರಿಗೆ ಶೇ. 10 ಎರಡನೇ ಬಾರಿಗೆ ಶೇ. 20 ಹಾಗೂ ಮೂರನೇ ಬಾರಿಗೆ ಶೇ. 30 ಒಟ್ಟು ಅನುಮೋದಿತ ವೆಚ್ಚದಲ್ಲಿ ದಂಡನೆ ವಿಧಿಸಲಾಗುವುದು. (ಸದರಿ ಮೊಬಲಗನ್ನು ತೋಟಗಾರಿಕೆ ಉಪ ನಿರ್ದೇಶಕರವರು ನಿರ್ಧರಿಸಿಕೊಳ್ಳುವುದು) ಇಷ್ಟಾಗಿಯೂ ಕೆಲಸ ಸಮರ್ಪಕವಾಗಿಲ್ಲದಿದ್ದಲ್ಲಿ ಗುತ್ತಿಗೆಯನ್ನು ರದ್ದುಪಡಿಸಿ ಠೇವಣಿಯನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು ಹಾಗೂ ಅಂತಹ ಸಂಸ್ಥೆ/ವ್ಯಕ್ತಿಯನ್ನು ಕಪ್ಪುಪಟ್ಟಿಗೆ ಸೇರಿಸಲು ಕ್ರಮ ವಹಿಸಲಾಗುವುದು.
10. ವಾರ್ಷಿಕ ಗುತ್ತಿಗೆ ಅವಧಿಯಲ್ಲಿ ನಿರ್ವಹಿಸಬೇಕಾದ ಕೆಲಸ ಕಾರ್ಯಗಳನ್ನು ತೃಪ್ತಿಕರವಾಗಿ ಹಾಗೂ ಸಮರ್ಪಕವಾಗಿ ನಿರ್ವಹಿಸದೇ ಇದ್ದಲ್ಲಿ ಯಾವುದೇ ಕಾರಣ ನೀಡದೇ ಗುತ್ತಿಗೆದಾರರನ್ನು ರದ್ದುಪಡಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರಲ್ಲಿ ಕಾಯ್ದಿರಿಸಲಾಗಿದೆ.

ಈ ಮೇಲಿನ ಯಾವುದೇ ಷರತ್ತುಗಳನ್ನು ಪೂರೈಸದ ಟೆಂಡರ್‌ಗಳನ್ನು ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ತೋಟಗಾರಿಕೆ ನಿರ್ದೇಶಕರು, ಲಾಲ್‌ಬಾಗ್, ಬೆಂಗಳೂರು ರವರು ಹೊಂದಿರುತ್ತಾರೆ.

ಹೆಚ್ಚಿನ ವಿವರಗಳನ್ನು ತೋಟಗಾರಿಕೆ ಉಪ ನಿರ್ದೇಶಕರು, ಕಬ್ಬನ್ ಉದ್ಯಾನವನ, ಬೆಂಗಳೂರು ಇವರ ಕಛೇರಿಯಲ್ಲಿ ಸಂಪರ್ಕಿಸಿ ಪಡೆಯಬಹುದು.

ತೋಟಗಾರಿಕೆ ಉಪ ನಿರ್ದೇಶಕರು,
ಕಬ್ಬನ್ ಉದ್ಯಾನವನ, ಬೆಂಗಳೂರು.

ಪಿ.ಆರ್. 617

## ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು

### ಟೆಂಡರ್-ಕಂ-ಹರಾಜು ಪ್ರಕಟಣೆ

**ಸಂಖ್ಯೆ:ಸಾಮಾನ್ಯ:ವಾಹನ:ಅನುಪಯುಕ್ತ:ಟ್ಯೂಬ್:03:2007-2008, ಬೆಂಗಳೂರು, ದಿನಾಂಕ: 5ನೇ ಅಕ್ಟೋಬರ್ 2007**

**ವಿಷಯ:** ಕೃಷಿ ಆಯುಕ್ತಾಲಯದ ವಾಹನಗಳ ಅನುಪಯುಕ್ತ ಟೈರ್ ಟ್ಯೂಬ್ ಮತ್ತು ಇತರೆ ಬಿಡಿ ಭಾಗಗಳನ್ನು ಟೆಂಡರ್ ಕಂ ಬಹಿರಂಗ ಹರಾಜಿನಲ್ಲಿ ವಿಲೆ ಮಾಡುವ ಬಗ್ಗೆ.

ಕೃಷಿ ಆಯುಕ್ತರ ಕಾರ್ಯಾಲಯದಲ್ಲಿರುವ ಈ ಕೆಳಗೆ ಕಾಣಿಸಿದ ವಾಹನಗಳ ಅನುಪಯುಕ್ತ ವಸ್ತುಗಳನ್ನು ಯಾವ ಸ್ಥಿತಿಯಲ್ಲಿದೆಯೋ ಅದೇ ಸ್ಥಿತಿಯಲ್ಲಿ ಇರುವ ಸ್ಥಳದಲ್ಲಿಯೇ ಟೆಂಡರ್-ಕಂ-ಬಹಿರಂಗ ಹರಾಜಿನ ಮೂಲಕ ಈ ಕೆಳಗೆ ವಿವರಿಸಿರುವ ಷರತ್ತುಗಳಿಗೆ ಒಳಪಟ್ಟು ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳ ಖರೀದಿದಾರರು ಟೆಂಡರ್ ಮತ್ತು ಬಹಿರಂಗ ಹರಾಜಿನಲ್ಲಿ ಭಾಗವಹಿಸಿ ಛಡ್ ಸವಾಲು ಮಾಡಬಹುದು.

| ಕ್ರ. ಸಂ. | ವಸ್ತುಗಳು | ಸಂಖ್ಯೆ | ಲಾಟ್ ನಂಬರ್ |
|---|---|---|---|
| 1 | ಹಳೆಯ ಟೈರು ಮತ್ತು ಟ್ಯೂಬ್‌ಗಳು | 121 | ಲಾಟ್ ನಂ 1 |
| 2 | ಟ್ಯೂಬ್‌ಗಳು | 69 | |

| ಕ್ರ. ಸಂ. | ವಸ್ತುಗಳು | ಸಂಖ್ಯೆ | ಲಾಟ್ ನಂಬರ್ |
|---|---|---|---|
| 3 | ವಾಹನಗಳ ಹಳೆಯ ಅನುಪಯುಕ್ತ ಬಿಡಿಭಾಗಗಳ ಒಂದು ಗುಡ್ಡೆ | 1 | ಲಾಟ್ ನಂ 2 |
| 4 | ವೀಲ್ ಡಿಸ್ಕಗಳು | 8 | |
| 5 | ಟ್ಯಾಂಕ್‌ಗಳು | 5 | |
| 6 | ರೇಡಿಯೇಟರ್ | 7 | |

| ವಿಕ್ರಯದ ಸ್ಥಳ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ ಮತ್ತು ವೇಳೆ | ಹರಾಜು ದಿನಾಂಕ ವೇಳೆ | ಬಹಿರಂಗ ಹರಾಜಿನ ಸ್ಥಳ | ಟೆಂಡರ್ ತೆರೆಯುವ ದಿನಾಂಕ ವೇಳೆ |
|---|---|---|---|---|
| ಕೃಷಿ ಆಯುಕ್ತರ ಕಾರ್ಯಾಲಯ ಶೇಷಾದ್ರಿ ರಸ್ತೆ, ಬೆಂಗಳೂರು-1 | 29.10.2007 ಅಪರಾಹ್ನ 4.00 ಗಂಟೆಯೊಳಗೆ | 30.10.2007 ಮಧ್ಯಾಹ್ನ 3.00 ಗಂಟೆಗೆ | ಕೃಷಿ ಆಯುಕ್ತರ ಕಛೇರಿ ಶೇಷಾದ್ರಿ ರಸ್ತೆ, ಬೆಂಗಳೂರು | ಹರಾಜಿನ ನಂತರ ಟೆಂಡರನ್ನು ತೆರೆಯಲಾಗುವುದು. |

**ಷರತ್ತುಗಳು:**

1. ಮೇಲೆ ಕಾಣಿಸಿದ ಅನುಪಯುಕ್ತ ವಸ್ತುಗಳನ್ನು ಕ್ರಮವಾಗಿ ಮೇಲೆ ನಮೂದಿಸಿರುವಂತೆ ಲಾಟ್‌ವಾರು ಪ್ರತ್ಯೇಕವಾಗಿ ಹರಾಜು ಮಾಡಲಾಗುವುದು.
2. ಟೆಂಡರ್‌ಗಳನ್ನು ಬಿಳಿ ಹಾಳೆಯಲ್ಲಿ ಪ್ರತಿ ಲಾಟ್‌ಗೆ ಮೊತ್ತವನ್ನು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆದು ತಮ್ಮ ಪೂರ್ಣ ಅಂಚೆ ವಿಳಾಸ ಬರೆದು ಇ.ಎಂ.ಡಿ. ರೂ.2000-00 ಮೊತ್ತದ ಬ್ಯಾಂಕ್ ಡ್ರಾಫ್ಟನ್ನು ಕೃಷಿ ನಿರ್ದೇಶಕರು ಬೆಂಗಳೂರು ಇವರ ಪದನಾಮದಲ್ಲಿ ಡ್ರಾ ಮಾಡಿ ಲಗತ್ತಿಸಿ ಮೊಹರು ಮಾಡಿದ ಲಕೋಟೆಯಲ್ಲಿ ದಿನಾಂಕ:29.10.2007ರೊಳಗೆ ಅಪರಾಹ್ನ 4.00 ಕೃಷಿ ನಿರ್ದೇಶಕರು, ಶೇಷಾದ್ರಿ ರಸ್ತೆ, ಬೆಂಗಳೂರು ಇವರ ಕಛೇರಿಗೆ ತಲುಪಿಸತಕ್ಕದ್ದು ಲಕೋಟೆಯ ಮೇಲೆ **"ವಾಹನಗಳ ಬಿಡಿ ಭಾಗಗಳ ಟೆಂಡರ್"** ಎಂದು ಸ್ಪಷ್ಟವಾಗಿ ದಪ್ಪ ಅಕ್ಷರಗಳಲ್ಲಿ ನಮೂದಿಸತಕ್ಕದ್ದು.
3. ವಸ್ತುಗಳನ್ನು ಕಛೇರಿಯ ಕೆಲಸದ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ಬೆಳಿಗ್ಗೆ 10 ರಿಂದ ಸಾಯಂಕಾಲ 5 ಗಂಟೆಯ ಒಳಗೆ ಪರಿಶೀಲಿಸಬಹುದು.
4. ಹರಾಜಿನಲ್ಲಿ ಭಾಗವಹಿಸುವವರು ರೂ.2000-00 (ರೂಪಾಯಿ ಎರಡು ಸಾವಿರ ಮಾತ್ರ) ಠೇವಣಿಯನ್ನು ನಗದು ರೂಪದಲ್ಲಿ ಹರಾಜಿನ ಮುಂಚೆ ಸಂದಾಯ ಮಾಡಬೇಕು ಅದರಂತೆ ಹರಾಜಿನಲ್ಲಿ ಭಾಗವಹಿಸುವ ಟೆಂಡರುದಾರರು ಪ್ರತ್ಯೇಕವಾಗಿ ಇ.ಎಂ.ಡಿ. ಹಣ ಸಂದಾಯ ಮಾಡಿ ಹರಾಜಿನಲ್ಲಿ ಭಾಗವಹಿಸಬಹುದು.
5. ಈ ಟೆಂಡರ್ ಕಂ ಹರಾಜು ಪ್ರಕಟಣೆಗೆ ಸಂಬಂಧಿಸಿದಂತೆ ಹೆಚ್ಚಿನ ಮಾಹಿತಿಗಾಗಿ ಈ ಕಛೇರಿಯ ಪ್ರಕಟಣೆ ಸಂಖ್ಯೆ ಸಾಮಾನ್ಯ/ವಾಹನ/ಅನುಪಯುಕ್ತ/ಟ್ಯೂಬ್/03/2007-08 ದಿನಾಂಕ: 21.8.2007ನ್ನು ಓದಿಕೊಳ್ಳುವುದು.

ಪಿ.ಆರ್. 622 ಕೃಷಿ ನಿರ್ದೇಶಕರ ಪರವಾಗಿ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

### ಟೆಂಡರ್ ಪ್ರಕಟಣೆ

**ಸಂಖ್ಯೆ: ಸಿಆಸುಇ 76 ಡಿಎಫ್‌ಆರ್ 2007, ಬೆಂಗಳೂರು, ದಿನಾಂಕ: 4ನೇ ಅಕ್ಟೋಬರ್ 2007**

ಕರ್ನಾಟಕ ಸರ್ಕಾರ ಸಚಿವಾಲಯದ ಕಛೇರಿ ಕಟ್ಟಡಗಳ ಸ್ವಚ್ಛತೆಗಾಗಿ ಈ ಕೆಳಕಂಡ ಸ್ವಚ್ಛತಾ ಪದಾರ್ಥಗಳನ್ನು ಆಗ್ಗಿಂದಾಗೆ ಅಗತ್ಯಕ್ಕೆ ತಕ್ಕ ಪ್ರಮಾಣದಲ್ಲಿ ಖರೀದಿಸಲು ಉದ್ದೇಶಿಸಲಾಗಿದೆ. ಈ ಸಂಬಂಧ ಮಾರಾಟಗಾರರಿಂದ ಸ್ವಚ್ಛತಾ ಪದಾರ್ಥಗಳ ಸರಬರಾಜಿಗಾಗಿ ಒಂದು ವರ್ಷದವರೆವಿಗೂ ದರ ನಿಗದಿಪಡಿಸುವ ಸಂಬಂಧ ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ. ಬಳಕೆ ಪದಾರ್ಥಗಳ ಖರೀದಿಯ ಅಂದಾಜು ಪರಿಮಾಣ ಸುಮಾರು ಈ ಕೆಳಕಂಡಂತಿದೆ:-

| ಕ್ರ. ಸಂ. | ಸಾಮಗ್ರಿಗಳ ವಿವರ | ವಾರ್ಷಿಕವಾಗಿ ಬೇಕಾಗುವ ಪರಿಮಾಣ |
|---|---|---|
| 1 | Cleaning Powder (Vim) | 4000 Kg |
| 2 | Phenoil (Herbal Cented) | 17000 Ltrs |
| 3 | Napthaline Balls | 200 Kg |
| 4 | Odonil Cake (Round) | 2000 Nos. |
| 5 | Odonil Cake (Square) | 2000 Nos. |
| 6 | Sandal Soap | 3000 Nos. |
| 7 | Mysore Bar Soap | 2000 Nos. |
| 8 | Urinal Cubes | 2500 Nos. |
| 9 | Washing Powder | 300 Kg |
| 10 | Acid | 300 Ltrs |
| 11 | Gunny Cloth | 1500 Mtrs |
| 12 | Duster Cloth | 3000 Mtrs |
| 13 | Gunny Thread | 100 Kg |
| 14 | Insect Spray | 150 Ltrs |

| ಕ್ರ. ಸಂ. | ಸಾಮಗ್ರಿಗಳ ವಿವರ | ವಾರ್ಷಿಕವಾಗಿ ಬೇಕಾಗುವ ಪರಿಮಾಣ |
|---|---|---|
| 15 | Coir Round Brush | 750 Nos. |
| 16 | Long Hand Brush (Moff) (Thread) | 100 Nos. |
| 17 | Long Hand Brush (Moff) (Thread)Refills | 1000 Nos. |
| 18 | Plastic Flat Brush | 350 Nos. |
| 19 | Unde Nylon Brush | 500 Nos. |
| 20 | Bleaching Powder | 1000 Kg |
| 21 | Plastic Bucket (Medium) | 200 Nos. |
| 22 | Plastic Bucket (Big) | 200 Nos. |
| 23 | Plastic Mug (Big) | 750 Nos. |
| 24 | Plastic Mug (Small) | 750 Nos. |
| 25 | Liquid Soap with sandal Perfume | 2000 Ltrs. |
| 26 | Room Spray | 500 Nos. |
| 27 | Plastic Mora | 500 Nos. |
| 28 | Flower Brooms | 1000 Nos. |
| 29 | Brooms (Coconut) | 2500 Nos. |
| 30 | Bombay Brooms | 2000 Nos. |
| 31 | Coline | 250 Nos. |

ಇಚ್ಛೆಯುಳ್ಳ ಮಾರಾಟಗಾರರು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ) ಕೊಠಡಿ ಸಂಖ್ಯೆ: 25, ನೆಲಮಹಡಿ, ವಿಧಾನಸೌಧ ಇಲ್ಲಿ ರೂ.100.00 + ಶೇಕಡ 12.5 ರಂತೆ ಮಾರಾಟ ತೆರಿಗೆಯನ್ನು ಒಟ್ಟು ರೂ.114/- (ರೂಪಾಯಿ ನೂರ ಹದಿನಾಲ್ಕು ಮಾತ್ರ)ನ್ನು ನಗದು ಅಥವಾ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿ ಸಲ್ಲಿಸಿ ನಂತರ ಟೆಂಡರ್ ನಮೂನೆಯನ್ನು ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ), ಕೊಠಡಿ ಸಂಖ್ಯೆ: 23, ನೆಲಮಹಡಿ, ವಿಧಾನಸೌಧ, ಇಲ್ಲಿಂದ ಪಡೆದುಕೊಳ್ಳಬಹುದು. ದಿನಾಂಕ: 31.10.2007 ರಂದು ಮಧ್ಯಾಹ್ನ 3.30 ಗಂಟೆಯವರೆಗೆ ಟೆಂಡರ್ ಅರ್ಜಿಗಳನ್ನು ನೀಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 3.11.2007 ರಂದು ಮಧ್ಯಾಹ್ನ 3.30 ಗಂಟೆವರೆಗೆ, ತದನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಟೆಂಡರ್ ಬುಲಿಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 23, ವಿಧಾನಸೌಧ, ಬೆಂಗಳೂರು 560 001 ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 5.11.2007 ರಂದು ಮಧ್ಯಾಹ್ನ 4.30 ಗಂಟೆಗೆ ತೆರೆಯಲಾಗುವುದು. ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜೆ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದಲೇ ಖರೀದಿಸಿ ನಿಗದಿತ ನಮೂನೆಯಲ್ಲಿಯೇ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2. ಮೊಹರಾದ ಟೆಂಡರ್ ಲಕೋಟೆಯ ಮೇಲೆ ಸ್ವಚ್ಛತಾ ಪದಾರ್ಥಗಳಿಗೆ ದರನಿಗಧಿಗಾಗಿ ಎಂದು ಬರೆಯತಕ್ಕದ್ದು.
3. ಟೆಂಡರ್‌ದಾರರು ಎಲ್ಲಾ ಸಾಮಗ್ರಿಗಳಿಗೂ ಅಥವಾ ಅವರು ಸರಬರಾಜು ಮಾಡುವ ಸಾಮಗ್ರಿಗಳಿಗೆ ಮಾತ್ರ ಸೀಮಿತಗೊಳಿಸಿ ದರಗಳನ್ನು ನಮೂದಿಸಬಹುದು.
4. ಟೆಂಡರ್‌ದಾರರು ಸೂಚಿಸಿದ ದರಕ್ಕೆ ತೆರಿಗೆಗಳಿದ್ದಲ್ಲಿ ಪ್ರತ್ಯೇಕ ನಮೂದಿಸಬೇಕು.
5. ಮುಂಗಡ ಠೇವಣಿ (ಇ.ಎಂ.ಡಿ) ಮೊತ್ತ ರೂ.5000/- ಗಳ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ), ವಿಧಾನಸೌಧ, ಬೆಂಗಳೂರು - 560 001 ಇವರ ಹೆಸರಿನಲ್ಲಿ ಸಲ್ಲಿಸತಕ್ಕದ್ದು. ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
6. ದರಪಟ್ಟಿಯೊಂದಿಗೆ ಕಳೆದ ಆರು ತಿಂಗಳ ಮೌಲ್ಯವರ್ಧಿತ ತೆರಿಗೆ ಸಲ್ಲಿಸಿದ ಬಗ್ಗೆ ದಾಖಲೆ.
7. ದರಪಟ್ಟಿಯೊಂದಿಗೆ ಕಳೆದ ಸಾಲಿನಲ್ಲಿ ಪಾವತಿಸಿದ ಆದಾಯ ತೆರಿಗೆ ಬಗ್ಗೆ ದಾಖಲೆಗಳನ್ನು (ಸರಳ್) ಸಲ್ಲಿಸತಕ್ಕದ್ದು.
8. ಸರಬರಾಜು ಮಾಡುವ ಸಾಮಗ್ರಿಗಳಿಗೆ 90 ದಿನಗಳವರೆಗಿನ ಸಿಂಧುತ್ವ ಇರಬೇಕು.
9. ನಮೂದಿಸುವ ದರವು ತೆರಿಗೆ ಸಾಗಾಣಿಕೆ ಇತ್ಯಾದಿಗಳನ್ನು ಒಳಗೊಂಡಿರಬೇಕು.
10. ಟೆಂಡರ್‌ನ್ನು ಅನುಮೋದಿಸಿದ್ದಲ್ಲಿ ಟೆಂಡರ್‌ದಾರರು ಗೊತ್ತುಪಡಿಸಿರುವ ದರದಲ್ಲಿಯೇ, ಗೊತ್ತುಪಡಿಸಿದ ದಿನಾಂಕದಿಂದ ಒಂದು ವರ್ಷದ ಅವಧಿಯವರೆಗೆ ಸಾಮಗ್ರಿಗಳನ್ನು ಒದಗಿಸಲು ಬದ್ಧರಿರಬೇಕು.
11. ಒದಗಿಸುವ ಸಾಮಗ್ರಿಗಳು ದೋಷದಿಂದ ಕೂಡಿದ್ದಲ್ಲಿ ಕೂಡಲೇ ಬದಲಾಯಿಸಲು ಬದ್ಧರಿರಬೇಕು, ಇಲ್ಲದಿದ್ದಲ್ಲಿ ಅವುಗಳನ್ನು ತಿರಸ್ಕರಿಸಲಾಗುವುದು.
12. ಸರಬರಾಜು ಮಾಡುವ ಸಾಮಗ್ರಿಗಳ ವಿಶಿಷ್ಟತೆಗಳ ಬಗ್ಗೆ ಪೂರ್ಣ ವಿವರಗಳನ್ನು ನಮೂದಿಸಿರಬೇಕು.
13. ಸಾಮಗ್ರಿಗಳನ್ನು ಒದಗಿಸುವಂತೆ ಪತ್ರ ಬರೆದ 10 (ಹತ್ತು) ದಿನಗಳೊಳಗಾಗಿ ಒದಗಿಸಲು ಬದ್ಧರಿರಬೇಕು.

14. ಯಶಸ್ವಿ ಟೆಂಡರ್‌ದಾರರು ಸಾಮಗ್ರಿಗಳ ಒಟ್ಟು ಮೌಲ್ಯದ ಶೇಕಡಾ 5% ಭದ್ರತಾ ಠೇವಣಿಯನ್ನು ಡಿ.ಡಿ. ರೂಪದಲ್ಲಿ ಸರ್ಕಾರದ ಅಧೀನ ಕಾರ್ಯದರ್ಶಿ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ), ವಿಧಾನ ಸೌಧ, ಬೆಂಗಳೂರು ಇವರ ಹೆಸರಿಗೆ ನೀಡತಕ್ಕದ್ದು.
15. ಯಶಸ್ವಿ ಟೆಂಡರ್‌ದಾರರ ಇ.ಎಂ.ಡಿ. ಮತ್ತು ಭದ್ರತಾ ಠೇವಣಿ ಮೊತ್ತವನ್ನು, ಸಾಮಗ್ರಿಗಳನ್ನು ಸರಬರಾಜು ಮಾಡಿದ ನಂತರ ಷರತ್ತುಗಳ ಉಲ್ಲಂಘನೆ ಆಗಿರದಿದ್ದಲ್ಲಿ ಮಾತ್ರ ವಾಪಸ್ಸು ಮಾಡಲಾಗುವುದು. ಇದಕ್ಕೆ ಯಾವುದೇ ರೀತಿಯ ಬಡ್ಡಿಯನ್ನು ನೀಡಲಾಗುವುದಿಲ್ಲ.
16. ಮೇಲಿನ ಅಂಶಗಳ ಬಗ್ಗೆ ಪೂರ್ಣ ವಿವರ ನೀಡತಕ್ಕದ್ದು. ಅಪೂರ್ಣ ವಿವರ ಇರುವ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
17. ಯಾವುದೇ ಕಾರಣವನ್ನು ನೀಡದೆ ಟೆಂಡರ್‌ಗಳನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕನ್ನು ಟೆಂಡರ್ ಅಂಗೀಕರಿಸುವ ಸಕ್ಷಮ ಅಧಿಕಾರಿಯವರು ಕಾಯ್ದಿರಿಸಿಕೊಂಡಿದ್ದಾರೆ. ಇವರ ನಿರ್ಣಯವೇ ಅಂತಿಮವಾದದ್ದು.

ಇನ್ನು ಹೆಚ್ಚಿನ ವಿವರಗಳಿಗೆ ಸರ್ಕಾರದ ಅಧೀನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ), ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ 22033440 ಅಥವಾ 22033487 ರಲ್ಲಿ ಸಂಪರ್ಕಿಸಬಹುದು.

**ಕೆ.ಎಸ್. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

**ನಮೂನೆ**

ಟೆಂಡರ್ ಪ್ರಕಟಣೆ ಸಂಖ್ಯೆ:

ಸ್ವಚ್ಛತಾ ಪದಾರ್ಥಗಳ ದರ

ಸಿಆಸುಇ 76 ಡಿಎಫ್‌ಆರ್ 2007

| ಕ್ರ. ಸಂ. | ಸಾಮಗ್ರಿಗಳ ವಿವರ | ದರ | ತೆರಿಗೆ ಶೇಕಡವಾರು |
|---|---|---|---|
| 1 | Cleaning Powder (Vim) | | |
| 2 | Phenoil (Herbal Cented) | | |
| 3 | Napthaline Balls | | |
| 4 | Odonil Cake (Round) | | |
| 5 | Odonil Cake (Square) | | |
| 6 | Sandal Soap | | |
| 7 | Mysore Bar Soap | | |
| 8 | Urinal Cubes | | |
| 9 | Washing Powder | | |
| 10 | Acid | | |
| 11 | Gunny Cloth | | |
| 12 | Duster Cloth | | |
| 13 | Gunny Thread | | |
| 14 | Insect Spray | | |
| 15 | Coir Round Brush | | |
| 16 | Long Hand Brush (Moff) (Thread) | | |
| 17 | Long Hand Brush (Moff) (Thread)Refills | | |
| 18 | Plastic Flat Brush | | |
| 19 | Unde Nylon Brush | | |
| 20 | Bleaching Powder | | |
| 21 | Plastic Bucket (Medium) | | |
| 22 | Plastic Bucket (Big) | | |
| 23 | Plastic Mug (Big) | | |
| 24 | Plastic Mug (Small) | | |
| 25 | Liquid Soap with sandal Perfume | | |
| 26 | Room Spray | | |
| 27 | Plastic Mora | | |
| 28 | Flower Brooms | | |
| 29 | Brooms (Coconut) | | |
| 30 | Bombay Brooms | | |
| 31 | Coline | | |

ಟೆಂಡರ್‌ದಾರರ ಸಹಿ
(ಪೂರ್ಣ ಹೆಸರು ವಿಳಾಸ ಮೊಹರಿನೊಂದಿಗೆ)

**ಕೆ.ಎಸ್. ಮಂಜುನಾಥ್**
ಸರ್ಕಾರದ ಅಧೀನ ಕಾರ್ಯದರ್ಶಿಗಳು,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಕಾರ್ಯಕಾರಿ)

ಪಿ.ಆರ್. 650

## ಪೊಲೀಸ್ ಇಲಾಖೆ

**CRESIP - 2007**

**(Common Recruitment Examination for Sub-Inspectors of Police)**

ಅಧಿಸೂಚನೆ ಸಂಖ್ಯೆ. 28/ನೇಮಕಾತಿ/2007–08, ದಿನಾಂಕ: 18ನೇ ಅಕ್ಟೋಬರ್ 2007

**ವಿಷಯ: ಪೊಲೀಸ್ ಸಬ್ ಇನ್‌ಸ್ಪೆಕ್ಟರ್ (ಎಫ್.ಪಿ.ಬಿ.), ಮಹಿಳಾ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎಫ್.ಪಿ.ಬಿ.), ರಿಸರ್ವ್ ಸಬ್ ಇನ್‌ಪೆಕ್ಟರ್ (ಸಿಎಆರ್/ಡಿಎಆರ್), ವಿಶೇಷ ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಕೆ.ಎಸ್.ಆರ್.ಪಿ.) ಮತ್ತು ಸೇವೆಯಲ್ಲಿರುವವರು ಒಳಗೊಂಡಂತೆ ಹುದ್ದೆಗಳಿಗೆ ನೇಮಕಾತಿ ಕುರಿತು.**

1. ಕರ್ನಾಟಕ ರಾಜ್ಯದ, ಪೊಲೀಸ್ ಇಲಾಖೆಯಲ್ಲಿ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎಫ್.ಪಿ.ಬಿ., ಬೆರಳು ಮುದ್ರೆ ಸಂಗ್ರಹಾಲಯ), ಮಹಿಳಾ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎಫ್.ಪಿ.ಬಿ., ಬೆರಳು ಮುದ್ರೆ ಸಂಗ್ರಹಾಲಯ), ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಸಿಎಆರ್/ಡಿಎಆರ್, ನಗರ/ಸಶಸ್ತ್ರ ಮೀಸಲು ಪಡೆ / ಜಿಲ್ಲಾ ಸಶಸ್ತ್ರ ಮೀಸಲು ಪಡೆ), ವಿಶೇಷ ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಕೆ.ಎಸ್.ಆರ್.ಪಿ., ಕರ್ನಾಟಕ ರಾಜ್ಯ ಮೀಸಲು ಪೊಲೀಸ್) ಮತ್ತು ಸೇವೆಯಲ್ಲಿರುವವರು ಒಳಗೊಂಡಂತೆ ಹುದ್ದೆಗಳ ನೇರ ನೇಮಕಾತಿಗಾಗಿ ಕರ್ನಾಟಕ ರಾಜ್ಯ ಪೊಲೀಸ್ ಲಿಪಿಕ ನೌಕರರ ಸೇವೆಗಳು ಸೇರಿದಂತೆ (ನೇಮಕಾತಿ) ನಿಯಮಗಳು 2004, ಕರ್ನಾಟಕ ರಾಜ್ಯ ಮೀಸಲು ಪೊಲೀಸ್ (ನೇಮಕಾತಿ ಮತ್ತು ಸೇವಾ ಷರತುಗಳು) ನಿಯಮಗಳು 2004, ಕರ್ನಾಟಕ ನಾಗರಿಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಾವಳಿ 1977 ಮತ್ತು ಕರ್ನಾಟಕ ನಾಗರಿಕ ಸೇವೆಗಳು (ಆಯ್ಕೆ ಮೂಲಕ ನೇರ ನೇಮಕಾತಿ) ನಿಯಮಾವಳಿ 1973ರ ಹಾಗು ಮೇಲೆ ತಿಳಿಯಪಡಿಸಿದ ನಿಯಮಗಳಿಗೆ ಕಾಲಕಾಲಕ್ಕೆ ಆಗುವ ತಿದ್ದುಪಡಿಗಳ ಅನುಸಾರ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಹುದ್ದೆಗೆ ಸೇರಲಿಚ್ಛಿಸುವ ಅಭ್ಯರ್ಥಿ ರೂ. 50/– ಗಳ ಅರ್ಜಿ ಶುಲ್ಕವನ್ನು **ನಗದು ರೂಪದಲ್ಲಿ** ಪಾವತಿಸಿ ದಿನಾಂಕ 12.11.2007 ರಿಂದ 24.11.2007 ರವರೆಗೆ ಬೆಳಿಗ್ಗೆ 10–00 ಗಂಟೆಯಿಂದ ಸಾಯಂಕಾಲ 5–00 ಗಂಟೆಯವರೆಗೆ ಎಲ್ಲಾ ಕೆಲಸದ ದಿನಗಳಂದು (Working Days) ಅರ್ಜಿಯನ್ನು ಈ ಕೆಳಗೆ ನಮೂದಿಸಿರುವ ಪೊಲೀಸ್ ಕಛೇರಿಗಳಲ್ಲಿ ಪಡೆದುಕೊಳ್ಳಬಹುದಾಗಿದೆ. ಅರ್ಹ ಅಭ್ಯರ್ಥಿಗಳಿಂದ ಭರ್ತಿ ಮಾಡಿದ ಅರ್ಜಿಗಳನ್ನು ರೂ. 150/– ಗಳ ಪರೀಕ್ಷಾ ಶುಲ್ಕದೊಂದಿಗೆ ದಿನಾಂಕ 24.11.2007 ರಂದು ಸಾಯಂಕಾಲ 6–00 ಗಂಟೆಯೊಳಗೆ ಅಥವಾ ಅದಕ್ಕಿಂತ ಮುಂಚಿತವಾಗಿ ಅರ್ಜಿಯನ್ನು ಖರೀದಿಸಿದ ಕಛೇರಿಯಲ್ಲಿಯೇ ಅಭ್ಯರ್ಥಿ ಖುದ್ದಾಗಿ ಸಲ್ಲಿಸಬಹುದಾಗಿರುತ್ತದೆ. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ–1 ಅಭ್ಯರ್ಥಿಗಳಿಗೆ ರೂ. 50/– ಗಳನ್ನು ಪರೀಕ್ಷಾ ಶುಲ್ಕವಾಗಿ ನಿಗದಿಪಡಿಸಲಾಗಿದೆ. ನಮೂದಿಸಿದೆ ಪರೀಕ್ಷಾ ಶುಲ್ಕವನ್ನು ಪಾವತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

| | | | |
|---|---|---|---|
| 1. | ಪೊಲೀಸ್ ಆಯುಕ್ತರು, ಬೆಂಗಳೂರು ನಗರ | 11. | ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ |
| 2. | ಪೊಲೀಸ್ ಆಯುಕ್ತರು, ಮೈಸೂರು ನಗರ | 12. | ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ |
| 3. | ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ನಗರ | 13. | ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು |
| | | 14. | ಪೊಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ |
| 4. | ಪೊಲೀಸ್ ಅಧೀಕ್ಷಕರು, ಬೀದರ್ ಜಿಲ್ಲೆ | 15. | ಪೊಲೀಸ್ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ |
| 5. | ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಜಿಲ್ಲೆ | 16. | ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ |
| 6. | ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ | 17. | ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ |
| 7. | ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ | 18. | ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ |
| 8. | ಪೊಲೀಸ್ ಅಧೀಕ್ಷಕರು, ಬಿಜಾಪೂರ ಜಿಲ್ಲೆ | 19. | ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ |
| 9. | ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ | 20. | ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ |
| 10. | ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ | 21. | ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ |

**ಸೂಚನೆ:** ಮೇಲ್ಕಾಣಿಸಿದ ಕಛೇರಿಗಳಿಂದ ಖರೀದಿಸಿದ ಅರ್ಜಿಗಳನ್ನು ಮಾತ್ರ ಸ್ವೀಕರಿಸಲಾಗುವುದು. ಜೆರಾಕ್ಸ್ ಮಾಡಿದ ಇಲ್ಲವೇ ಖಾಸಗಿ ವ್ಯಕ್ತಿಗಳಿಂದ ಕೊಂಡಂತಹ ಅರ್ಜಿಗಳು ಸ್ವೀಕೃತಿಗೆ ಅನರ್ಹವಾಗುತ್ತದೆ. ಕೊರಿಯರ್ / ಪೋಸ್ಟ್ ಮುಖಾಂತರ ಕಳುಹಿಸಲಾಗುವ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ಸರಿಯಾಗಿ ಭರ್ತಿ ಮಾಡಿದ ಹಾಗು ಖುದ್ದಾಗಿ ಕೌಂಟರ್‌ನಲ್ಲಿ ನೀಡುವ ಅರ್ಜಿಗಳನ್ನು ಮಾತ್ರ ಸ್ವೀಕರಿಸಲಾಗುವುದು.

**ಈ ಕೆಳಗೆ ನಮೂದಿಸಿರುವ ಖಾಲಿ ಹುದ್ದೆಗಳ ಸಂಖ್ಯೆ ತಾತ್ಕಾಲಿಕವಾಗಿದ್ದು, ಅವಶ್ಯಕತೆ ಹಾಗೂ ಸಂದರ್ಭಕ್ಕೆ ಅನುಗುಣವಾಗಿ ಬದಲಾವಣೆ ಮಾಡಲಾಗುವುದು.**

1) ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎಫ್.ಪಿ.ಬಿ.) – 17 ಹುದ್ದೆಗಳು
2) ಮಹಿಳಾ ಪೊಲೀಸ್ ಸಬ್ ಇನ್‌ಪೆಕ್ಟರ್ (ಎಫ್.ಪಿ.ಬಿ.) – 02 ಹುದ್ದೆಗಳು
3) ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎಫ್.ಪಿ.ಬಿ.) ಸೇವೆಯಲ್ಲಿರುವವರಿಗೆ – 02 ಹುದ್ದೆಗಳು
4) ವಿಶೇಷ ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಕೆ.ಎಸ್.ಆರ್.ಪಿ) – 36 ಹುದ್ದೆಗಳು
5) ವಿಶೇಷ ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಕೆ.ಎಸ್.ಆರ್.ಪಿ) ಸೇವೆಯಲ್ಲಿರುವವರಿಗೆ – 04 ಹುದ್ದೆಗಳು
6) ರಿಸರ್ವ್ ಸಬ್ ಇನ್‌ಪೆಕ್ಟರ್ (ಸಿಎಆರ್/ಡಿಎಆರ್) – 90 ಹುದ್ದೆಗಳು
7) ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಸಿಎಆರ್/ಡಿಎಆರ್) ಸೇವೆಯಲ್ಲಿರುವವರಿಗೆ – 10 ಹುದ್ದೆಗಳು

---

**ಒಟ್ಟು – 161 ಹುದ್ದೆಗಳು**

---

ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎಫ್.ಪಿ.ಬಿ.), ಮಹಿಳಾ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎಫ್.ಪಿ.ಬಿ.), ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಸಿಎಆರ್/ಡಿಎಆರ್), ವಿಶೇಷ ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಕೆ.ಎಸ್.ಆರ್.ಪಿ.) ಮತ್ತು ಸೇವೆಯಲ್ಲಿರುವವರನ್ನೊಳಗೊಂಡಂತೆ ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:

ಎ) ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎಫ್.ಪಿ.ಬಿ.) – 17 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 9 | 3 | 1 | – | 1 | 4 |
| ಪರಿಶಿಷ್ಟ ಜಾತಿ | 2 | – | – | – | – | 2 |
| ಪರಿಶಿಷ್ಟ ಪಂಗಡ | – | – | – | – | – | – |
| ಪ್ರವರ್ಗ–1 | 1 | – | – | – | – | 1 |
| ಪ್ರವರ್ಗ–2ಎ | 3 | 1 | – | – | – | 2 |
| ಪ್ರವರ್ಗ–2ಬಿ | – | – | – | – | – | – |
| ಪ್ರವರ್ಗ–3ಎ | 1 | – | – | – | – | 1 |
| ಪ್ರವರ್ಗ–3ಬಿ | 1 | – | – | – | – | 1 |
| **ಒಟ್ಟು** | **17** | **4** | **1** | – | **1** | **11** |

ಬಿ) ಮಹಿಳಾ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎಫ್.ಪಿ.ಬಿ.) – 02 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಸಾಮಾನ್ಯ ವರ್ಗ | 1 | – | – | – | 1 |
| ಪರಿಶಿಷ್ಟ ಜಾತಿ | 1 | – | – | – | 1 |
| **ಒಟ್ಟು** | **2** | – | – | – | **2** |

ಸಿ) ಪೊಲೀಸ್ ಸಬ್ ಇನ್ಸ್‌ಪೆಕ್ಟರ್ (ಎಫ್.ಪಿ.ಬಿ.) ಸೇವೆಯಲ್ಲಿರುವವರು – 02 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಸಾಮಾನ್ಯ ವರ್ಗ | 1 | – | – | – | 1 |
| ಪರಿಶಿಷ್ಟ ಜಾತಿ | 1 | – | – | – | 1 |
| **ಒಟ್ಟು** | **2** | – | – | – | **2** |

ಡಿ) ವಿಶೇಷ ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಕೆ.ಎಸ್.ಆರ್.ಪಿ.) – 36 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 18 | 5 | 2 | 1 | – | 10 |
| ಪರಿಶಿಷ್ಟ ಜಾತಿ | 6 | 2 | 1 | – | – | 3 |
| ಪರಿಶಿಷ್ಟ ಪಂಗಡ | 1 | – | – | – | – | 1 |
| ಪ್ರವರ್ಗ–1 | 1 | 1 | – | – | – | – |
| ಪ್ರವರ್ಗ–2ಎ | 5 | 2 | 1 | – | – | 2 |
| ಪ್ರವರ್ಗ–2ಬಿ | 2 | 1 | – | – | – | 1 |
| ಪ್ರವರ್ಗ–3ಎ | 1 | – | – | – | – | 1 |
| ಪ್ರವರ್ಗ–3ಬಿ | 2 | 1 | – | – | – | 1 |
| **ಒಟ್ಟು** | **36** | **12** | **4** | **1** | – | **19** |

**ಇ) ವಿಶೇಷ ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಕೆ.ಎಸ್.ಆರ್.ಪಿ.) ಸೇವೆಯಲ್ಲಿರುವವರು – 04 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಸಾಮಾನ್ಯ ವರ್ಗ | 2 | 1 | – | – | 1 |
| ಪ್ರವರ್ಗ–1 | 1 | – | – | – | 1 |
| ಪ್ರವರ್ಗ–2ಎ | 1 | – | – | – | 1 |
| **ಒಟ್ಟು** | **4** | **1** | – | – | **3** |

**ಎಫ್) ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಸಿಎಆರ್/ಡಿಎಆರ್) – 90 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಮಾಜಿ ಸೈನಿಕರು | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|---|
| ಸಾಮಾನ್ಯ ವರ್ಗ | 45 | 12 | 4 | 2 | 2 | 25 |
| ಪರಿಶಿಷ್ಟ ಜಾತಿ | 13 | 3 | 1 | 1 | 1 | 7 |
| ಪರಿಶಿಷ್ಟ ಪಂಗಡ | 3 | 1 | – | – | – | 2 |
| ಪ್ರವರ್ಗ–1 | 4 | 1 | – | – | – | 3 |
| ಪ್ರವರ್ಗ–2ಎ | 13 | 3 | 1 | 1 | 1 | 7 |
| ಪ್ರವರ್ಗ–2ಬಿ | 4 | 1 | – | – | – | 3 |
| ಪ್ರವರ್ಗ–3ಎ | 3 | 1 | – | – | – | 2 |
| ಪ್ರವರ್ಗ–3ಬಿ | 5 | 2 | – | – | – | 3 |
| **ಒಟ್ಟು** | **90** | **24** | **6** | **4** | **4** | **52** |

**ಎಫ್) ರಿಸರ್ವ್ ಸಬ್ ಇನ್ಸ್‌ಪೆಕ್ಟರ್ (ಸಿಎಆರ್/ಡಿಎಆರ್) ಸೇವೆಯಲ್ಲಿರುವವರು – 10 ಖಾಲಿ ಹುದ್ದೆಗಳ ವರ್ಗೀಕರಣ ಈ ಕೆಳಕಂಡಂತಿದೆ:**

| ವರ್ಗ | ಒಟ್ಟು ಹುದ್ದೆಗಳ ಸಂಖ್ಯೆ | ಗ್ರಾಮೀಣ ಅಭ್ಯರ್ಥಿ | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ | ಕನ್ನಡ ಮಾಧ್ಯಮ | ಇತರರು |
|---|---|---|---|---|---|
| ಸಾಮಾನ್ಯ ವರ್ಗ | 5 | 2 | – | – | 3 |
| ಪರಿಶಿಷ್ಟ ಜಾತಿ | 1 | – | – | – | 1 |
| ಪರಿಶಿಷ್ಟ ಪಂಗಡ | – | – | – | – | – |
| ಪ್ರವರ್ಗ–1 | – | – | – | – | – |
| ಪ್ರವರ್ಗ–2ಎ | 1 | – | – | – | 1 |
| ಪ್ರವರ್ಗ–2ಬಿ | 1 | – | – | – | 1 |
| ಪ್ರವರ್ಗ–3ಎ | 1 | – | – | – | 1 |
| ಪ್ರವರ್ಗ–3ಬಿ | 1 | – | – | – | 1 |
| **ಒಟ್ಟು** | **10** | **2** | – | – | **8** |

**ಟಿಪ್ಪಣಿ :–** ಗ್ರಾಮೀಣ, ಮಾಜಿ ಸೈನಿಕರು, ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿ ಮತ್ತು ಕನ್ನಡ ಮಾಧ್ಯಮ ಅಭ್ಯರ್ಥಿಗಳು ಲಭ್ಯವಿಲ್ಲದಿದ್ದಲ್ಲಿ ಅಂತಹ ಖಾಲಿ ಹುದ್ದೆಗಳನ್ನು ಮೇಲೆ ನಮೂದಿಸಿರುವ ಪ್ರವರ್ಗದ ಇತರ ಅಭ್ಯರ್ಥಿಗಳಿಂದ ತುಂಬಲಾಗುವುದು.

2. **ಅರ್ಹತೆಗಳು:**

(1) **ಅರ್ಹತಾ ಷರತ್ತುಗಳು** :

ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

(2) <u>ವಯೋಮಿತಿ:</u>

**ಎ) ಸಾಮಾನ್ಯ ಮತ್ತು ಮಹಿಳಾ ಅಭ್ಯರ್ಥಿಗಳಿಗೆ:**

ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 24.11.2007 ಕ್ಕೆ ಅಭ್ಯರ್ಥಿಗೆ ಕನಿಷ್ಟ 21 ವರ್ಷ ವಯಸ್ಸಾಗಿರಬೇಕು ಹಾಗೂ ಈ ಕೆಳಕಂಡ ವಯಸ್ಸು ಮೀರಿರಬಾರದು.

ಅ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ 26 ವರ್ಷಗಳು.

ಆ) ಇತರೆ ಅಭ್ಯರ್ಥಿಗಳಿಗೆ ಗರಿಷ್ಠ 24 ವರ್ಷಗಳು.

**ಬಿ) ಸೇವಾನಿರತ ಅಭ್ಯರ್ಥಿಗಳಿಗೆ:**

ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಂದರೆ 24.11.2007ಕ್ಕೆ ಅಭ್ಯರ್ಥಿಗೆ ಈ ಕೆಳಕಂಡ ವಯಸ್ಸು ಮೀರಿರಬಾರದು–

ಅ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳಿಗೆ ಗರಿಷ್ಠ 40 ವರ್ಷಗಳು.

ಆ) ಇತರೆ ಅಭ್ಯರ್ಥಿಗಳಿಗೆ ಗರಿಷ್ಠ 35 ವರ್ಷಗಳು.

**ಟಿಪ್ಪಣಿ:** ಪೊಲೀಸ್ ಇಲಾಖೆಯ ಯಾವುದೇ ವೃಂದದಲ್ಲಿ 8 ವರ್ಷಗಳು ಕನಿಷ್ಟ ಸೇವೆಯನ್ನು ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ / ಮುಖ್ಯ ಪೇದೆ / ಪೊಲೀಸ್ ಪೇದೆಯಾಗಿ ಹೊಂದಿರಬೇಕು.

**ಸಿ) <u>ಮಾಜಿ ಸೈನಿಕ ಅಭ್ಯರ್ಥಿಗಳಿಗೆ:</u>**

ಕರ್ನಾಟಕ ಸರ್ಕಾರವು ಅಧಿಸೂಚನೆ ಸಂಖ್ಯೆ. ಹೆಚ್‌ಟಿಡಿ/62/ಪೊಸಅ/2003, ದಿನಾಂಕ 11.12.2003 ರನ್ವಯ ಮಾಜಿ ಸೈನಿಕ ಅಭ್ಯರ್ಥಿಯು ಸೈನ್ಯ ನಿಯೋಜನೆ, ಸೇವೆಯಿಂದ ತೆಗೆದುಹಾಕಿದ ಹಾಗೂ ಸೇವಾ ನಿವೃತ್ತಿ ಹೊಂದಿದ ಕಾರಣದಿಂದ ಬಿಡುಗಡೆಯಾದ ಮಾಜಿ ಯೋಧರಾಗಿದ್ದಲ್ಲಿ "ಅವರು ಸೇವೆ ಸಲ್ಲಿಸಿದ ಅವಧಿ" ಯ ಜೊತೆಗೆ ಹೆಚ್ಚುವರಿ ಮೂರು ವರ್ಷಗಳ ರಿಯಾಯಿತಿಗಳನ್ನು ನೀಡಲಾಗುವುದು. ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

**<u>ಮಾಜಿ ಸೈನಿಕರ ಬಗ್ಗೆ ವಿವರಣೆ:</u>**

(i) ಮಾಜಿ ಸೈನಿಕ ಎಂದರೆ ಸಶಸ್ತ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಅಯೋಧನಾಗಿ) ಸೇವೆ ಸಲ್ಲಿಸಿದ ವ್ಯಕ್ತಿ, ಆದರೆ ಡಿಫೆನ್ಸ್ ಸೆಕ್ಯುರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ: ಮತ್ತು

(ಅ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

**ಅಥವಾ**

(ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಲ್ಲಿ ಬಿಡುಗಡೆಯಾದವನು.

**ಅಥವಾ**

(ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

**ಅಥವಾ**

(ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು.

1. ನಿರಂತರ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದ ಪಿಂಚಣಿದಾರರು.
2. ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.
3. ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

**ವಿವರಣೆ**: ಕೇಂದ್ರ ಸಶಸ್ತ್ರದಳದ ಸೇವೆಯಲ್ಲಿ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ

ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗಳಿಗೆ ನೇಮಕ ಹೊಂದುವಂತಿಲ್ಲ.

(ii) ಭಾರತ ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ.36034/27/84–ಸಿಬ್ಬಂದಿ (ಎಸ್‌ಸಿಟಿ), ದಿನಾಂಕ 02.05.1985 ರನ್ವಯ ಮಾಜಿ ಸೈನಿಕರು ಅವರಿಗೆ ನೀಡಿರುವ ಪ್ರಯೋಜನವಾದ ಪುನರ್ ನೇಮಕವನ್ನು ಉಪಯೋಗಿಸಿಕೊಂಡು ಒಂದು ಬಾರಿ ಸರ್ಕಾರಿ ಹುದ್ದೆಗೆ ಆಯ್ಕೆಯಾದಲ್ಲಿ ಅಂತಹ ಮಾಜಿ ಸೈನಿಕರ ಸ್ಥಾನವು ಸರ್ಕಾರಿ ಉದ್ಯೋಗದ ಪುನರ್ ನೇಮಕಕ್ಕೆ ರದ್ದಾಗುತ್ತದೆ. ಕರ್ನಾಟಕ ಸರ್ಕಾರದ ಪತ್ರ ಸಂಖ್ಯೆ.ಒಇ/90/ಪೊಸಿಅ/2005, ದಿನಾಂಕ 02.02.2006ರ ಪತ್ರದಲ್ಲಿ ದಿನಾಂಕ 02.05.1985ರ ಕೇಂದ್ರ ಸರ್ಕಾರದ ಅಧಿಕೃತ ಜ್ಞಾಪನದಲ್ಲಿನ ಮಾರ್ಗಸೂಚಿಯನ್ವಯ ಕ್ರಮ ಕೈಗೊಳ್ಳುವಂತೆ ಸೂಚಿಸಲಾಗಿರುತ್ತದೆ. **(ಈ ಕಾರಣದಿಂದ ಮಾಜಿ ಸೈನಿಕರು ಕಡ್ಡಾಯವಾಗಿ ಅರ್ಜಿಯ (OMR) ಕಾಲಂ 8ಎ ಭರ್ತಿ ಮಾಡತಕ್ಕದ್ದು)**

(iii) ಈ ಅರ್ಜಿಯನ್ನು ಸಲ್ಲಿಸುವ ಕೊನೆಯ ದಿನಾಂಕದ ನಂತರ ಯಾವೊಬ್ಬ ಮಾಜಿ ಸೈನಿಕ ಸರ್ಕಾರಿ ನೌಕರಿಯೊಂದಕ್ಕೆ ಮಾಜಿ ಸೈನಿಕ ಮೀಸಲಾತಿ ಪಡೆದು ಸೇರಿದರೆ, ಅಂತಹ ಮಾಜಿ ಸೈನಿಕ ತಾನು ನೌಕರಿ ಸೇರಿದ ಬಗ್ಗೆ ಸದಸ್ಯ ಕಾರ್ಯದರ್ಶಿಗಳ ಕಛೇರಿಗೆ ಮಾಹಿತಿ ನೀಡತಕ್ಕದ್ದು. ಇಂತಹ ಅಭ್ಯರ್ಥಿಯು ಮಾಜಿ ಸೈನಿಕ ಮೀಸಲಾತಿಗೆ ಅನರ್ಹನಾಗುತ್ತಾನೆ.

(iv) ಮಾಜಿ ಯೋಧ ಎಂಬ ಶಬ್ದವು ಚಾಲ್ತಿಯಲ್ಲಿರುವ ಸಂಬಂಧಿಸಿದ ನಿಯಮಾವಳಿಗಳಲ್ಲಿನ ಪರಿಭಾಷೆಯ ಅರ್ಥ ಹೊಂದಿದೆ.

(3) **ವಿದ್ಯಾರ್ಹತೆ:**

ಯು.ಜಿ.ಸಿ. ಇಂದ ಮಾನ್ಯತೆ ಪಡೆದಿರುವ ಅಂಗೀಕೃತ ವಿಶ್ವವಿದ್ಯಾಲಯದಲ್ಲಿ ಪದವಿ ಅಥವಾ ತತ್ಸಮಾನ ಪದವಿಯನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕ, ಅಂದರೆ 24.11.2007 ಕ್ಕೆ ಹೊಂದಿರಬೇಕು.

**ಸೇವಾನಿರತ ಅಭ್ಯರ್ಥಿಗಳಿಗೆ ವಿದ್ಯಾರ್ಹತೆ ಮತ್ತು ಅನುಭವ:**

ಅಂಗೀಕೃತ ವಿಶ್ವವಿದ್ಯಾಲಯದಲ್ಲಿ ಪದವಿ ಅಥವಾ ತತ್ಸಮಾನ ಪದವಿ ಜೊತೆಯಲ್ಲಿ ಪೊಲೀಸ್ ಇಲಾಖೆಯ ಯಾವುದೇ ವೃಂದದಲ್ಲಿ 8 ವರ್ಷಗಳ ಕನಿಷ್ಠ ಸೇವೆಯನ್ನು ಸಹಾಯಕ ಪೊಲೀಸ್ ಸಬ್ ಇನ್ಸ್‌ಪೆಕ್ಟರ್ / ಮುಖ್ಯ ಪೇದೆ / ಪೊಲೀಸ್ ಪೇದೆಯಾಗಿ ಪೂರ್ಣಗೊಳಿಸಿರಬೇಕು.

**ಟಿಪ್ಪಣಿ** :

(1) ಡಿಪ್ಲೊಮಾ ಇತ್ಯಾದಿ ವಿದ್ಯಾರ್ಹತೆಗಳು ಪದವಿಗೆ ಸಮಾನವಾಗುವುದಿಲ್ಲ. ಆದ್ದರಿಂದ ಸಬ್ ಇನ್ಸ್‌ಪೆಕ್ಟರ್ ಆಫ್ ಪೊಲೀಸ್ ಹುದ್ದೆಗೆ ಈ ವಿದ್ಯಾರ್ಹತೆಯ ಅಭ್ಯರ್ಥಿಗಳು ಅರ್ಹರಾಗುವುದಿಲ್ಲ.

(2) ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕದಂದು ನಿಗಧಿತ ವಿದ್ಯಾರ್ಹತೆಯಾದ ಪದವಿಯನ್ನು ಪಡೆಯಲು ಪರೀಕ್ಷೆ ಬರೆದು ಫಲಿತಾಂಶಕ್ಕಾಗಿ ಕಾಯುತ್ತಿರುವ ಅಭ್ಯರ್ಥಿಗಳು ಅರ್ಹರಾಗಿರುವುದಿಲ್ಲ. ಮೇಲಿನ ವಿದ್ಯಾರ್ಹತೆಯನ್ನು ಹೊರತು ಪಡಿಸಿ ಬೇರೆ ಯಾವ ವಿದ್ಯಾರ್ಹತೆಯನ್ನೂ ಪರಿಗಣಿಸಲಾಗುವುದಿಲ್ಲ.

**(4) ತರಬೇತಿ, ಖಾಯಂಪೂರ್ವ ಅವಧಿ ಮತ್ತು ವೇತನ ಶ್ರೇಣಿ:**

**(ಎ) ತರಬೇತಿ:**

ನೇಮಕಾತಿ ಹೊಂದಿದ ಅಭ್ಯರ್ಥಿಗಳು ಕರ್ನಾಟಕ ಪೊಲೀಸ್ ಅಕಾಡೆಮಿ, ಮೈಸೂರು ಅಥವ ಪೊಲೀಸ್ ತರಬೇತಿ ಕೇಂದ್ರ, ಗುಲ್ಬರ್ಗ ಅಥವ ಪೊಲೀಸ್ ಇಲಾಖೆಯು ತೀರ್ಮಾನಿಸಿದ ಇತರೆ ತರಬೇತಿ ಕೇಂದ್ರದಲ್ಲಿ ಹನ್ನೆರಡು ತಿಂಗಳ ತರಬೇತಿಯನ್ನು ಪಡೆಯಬೇಕಾಗಿದ್ದು, ತರಬೇತಿಯ ಕೊನೆಯಲ್ಲಿ ನಿಗದಿತ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕು.

**(ಬಿ) ಖಾಯಂಪೂರ್ವ ಅವಧಿ:**

ಮೂಲ ತರಬೇತಿ ಮತ್ತು ಪ್ರಾಯೋಗಿಕ ತರಬೇತಿ ಸೇರಿದಂತೆ ಎರಡು ವರ್ಷ ಆರು ತಿಂಗಳು.

**(ಸಿ) ವೇತನ ಶ್ರೇಣಿ:**

ರೂ. 10000–250–10500–300–12300–350–14400–400–16800–450–18150

(5) **ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆ:**

ಅಭ್ಯರ್ಥಿಗಳಿಗೆ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಯನ್ನು 06 ವಲಯ ಕೇಂದ್ರ ಕಛೇರಿಗಳಲ್ಲಿ ನಡೆಸಲಾಗುವುದು. ಅಭ್ಯರ್ಥಿಯು ಓ.ಎಂ.ಆರ್. ನಲ್ಲಿ ನೀಡಿರುವ ಮಾಹಿತಿ ಮೇರೆಗೆ ಅಭ್ಯರ್ಥಿಗಳಿಗೆ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಗಳಿಗೆ ಕರೆಯಲಾಗುವುದು. ಆದ್ದರಿಂದ ಅಭ್ಯರ್ಥಿಗಳು ಓ.ಎಂ.ಆರ್. ಅರ್ಜಿಯನ್ನು ಬಹಳ ಜಾಗರೂಕತೆಯಿಂದ ತುಂಬಬೇಕು. ಒಂದು ವೇಳೆ ಯಾವುದೇ ತಪ್ಪು / ಸುಳ್ಳು ಮಾಹಿತಿ ನೀಡಿದ್ದಲ್ಲಿ ಅಂತಹ ಅಭ್ಯರ್ಥಿಯ ಅಭ್ಯರ್ಥಿತನವು ರದ್ದಾಗುತ್ತದೆ. ಇದಕ್ಕೆ ಅಭ್ಯರ್ಥಿಯೇ ಸಂಪೂರ್ಣ ಜವಾಬ್ದಾರನಾಗಿರುತ್ತಾನೆ.

ಒಂದಕ್ಕಿಂತ ಹೆಚ್ಚು ಅರ್ಜಿ ಸಲ್ಲಿಸಿ ಒಂದಕ್ಕಿಂತ ಹೆಚ್ಚು ಕಡೆಗಳಲ್ಲಿ ದೈಹಿಕ ಪರೀಕ್ಷೆಗಳಿಗೆ ಹಾಜರಾದರೆ, ಅಂತಹ ಅಭ್ಯರ್ಥಿಯ ಅಭ್ಯರ್ಥಿತನವನ್ನು ರದ್ದು ಪಡಿಸಲಾಗುವುದು. (ವಿಶೇಷ ಸೂಚನೆಗಳು 15(3) ನೋಡಿ) ಆಯ್ಕೆ ಸಮಿತಿಯ ತೀರ್ಮಾನವೇ ಅಂತಿಮ.

ಅಭ್ಯರ್ಥಿಗಳಿಗೆ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಯ ದಿನಾಂಕ, ಸಮಯ ಮತ್ತು ಸ್ಥಳವನ್ನು ಪ್ರತ್ಯೇಕವಾಗಿ ಅಂಚೆ ಮುಖಾಂತರ ತಿಳಿಸಲಾಗುವುದು ಡಿಸೆಂಬರ್ ತಿಂಗಳ ಎರಡನೇ ವಾರದಲ್ಲಿ ಈ ಪರೀಕ್ಷೆಗಳನ್ನು ನಡೆಸಲು ಉದ್ದೇಶಿಸಲಾಗಿದೆ. ಹಾಗೂ ಈ ಕೆಳಕಂಡ ಕಛೇರಿಗಳ ಸೂಚನಾ ಫಲಕದಲ್ಲಿ ಮಾಹಿತಿಯು ನೋಂದಣಿ ಸಂಖ್ಯೆ ಸಮೇತ ಲಭ್ಯವಿರುವುದು. ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಯನ್ನು 6 ಕೇಂದ್ರಗಳಲ್ಲಿ

ನಡೆಸಲಾಗುವುದು ಅಂದರೆ : ಬೆಂಗಳೂರು, ಬೆಳಗಾವಿ, ದಾವಣಗೆರೆ, ಗುಲ್ಬರ್ಗಾ, ಮಂಗಳೂರು ಮತ್ತು ಮೈಸೂರು. ಅಭ್ಯರ್ಥಿಗಳು ಅರ್ಜಿಯನ್ನು ಯಾವ ಕಛೇರಿಯಲ್ಲಿ ಪಡೆದು ಸಲ್ಲಿಸಿರುತ್ತಾರೋ ಅದೇ ಜಿಲ್ಲೆಗೆ ಸಂಬಂಧಿಸಿದ ಕೇಂದ್ರ ಕಛೇರಿಯಲ್ಲಿ ನಡೆಸಲಾಗುವುದು. (ಉದಾ: ಕೋಲಾರದಲ್ಲಿ ಅರ್ಜಿ ಪಡೆದು ಸಲ್ಲಿಸಿದ್ದರೆ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆ ಹಾಗೂ ಲಿಖಿತ ಪರೀಕ್ಷೆಯ ಕೇಂದ್ರವನ್ನಾಗಿ ಬೆಂಗಳೂರನ್ನೇ ಆಯ್ಕೆ ಮಾಡಬೇಕು).

| **ಅರ್ಜಿ ಸ್ವೀಕೃತಿ, ಸಲ್ಲಿಕೆ** | **ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಮತ್ತು ಲಿಖಿತ ಪರೀಕ್ಷೆಯ ಕೇಂದ್ರಗಳು** |
|---|---|
| 1. ಪೊಲೀಸ್ ಆಯುಕ್ತರು, ಬೆಂಗಳೂರು ನಗರ<br>2. ಪೊಲೀಸ್ ಅಧೀಕ್ಷಕರು, ಕೋಲಾರ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ತುಮಕೂರು ಜಿಲ್ಲೆ | ಬೆಂಗಳೂರು |
| 1. ಪೊಲೀಸ್ ಆಯುಕ್ತರು, ಹುಬ್ಬಳ್ಳಿ–ಧಾರವಾಡ ನಗರ<br>2. ಪೊಲೀಸ್ ಅಧೀಕ್ಷಕರು, ಬೆಳಗಾವಿ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ಬಿಜಾಪೂರ ಜಿಲ್ಲೆ<br>4. ಪೊಲೀಸ್ ಅಧೀಕ್ಷಕರು, ಹಾವೇರಿ ಜಿಲ್ಲೆ | ಬೆಳಗಾವಿ |
| 1. ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ<br>2. ಪೊಲೀಸ್ ಅಧೀಕ್ಷಕರು, ಬಳ್ಳಾರಿ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ಶಿವಮೊಗ್ಗ ಜಿಲ್ಲೆ | ದಾವಣಗೆರೆ |
| 1. ಪೊಲೀಸ್ ಅಧೀಕ್ಷಕರು, ಬೀದರ್ ಜಿಲ್ಲೆ<br>2. ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ರಾಯಚೂರು ಜಿಲ್ಲೆ | ಗುಲ್ಬರ್ಗಾ |
| 1. ಪೊಲೀಸ್ ಅಧೀಕ್ಷಕರು, ದಕ್ಷಿಣ ಕನ್ನಡ ಜಿಲ್ಲೆ, ಮಂಗಳೂರು<br>2. ಪೊಲೀಸ್ ಅಧೀಕ್ಷಕರು, ಉಡುಪಿ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ಉತ್ತರ ಕನ್ನಡ ಜಿಲ್ಲೆ, ಕಾರವಾರ<br>4. ಪೊಲೀಸ್ ಅಧೀಕ್ಷಕರು, ಚಿಕ್ಕಮಗಳೂರು ಜಿಲ್ಲೆ | ಮಂಗಳೂರು |
| 1. ಪೊಲೀಸ್ ಆಯುಕ್ತರು, ಮೈಸೂರು ನಗರ<br>2. ಪೊಲೀಸ್ ಅಧೀಕ್ಷಕರು, ಮಂಡ್ಯ ಜಿಲ್ಲೆ<br>3. ಪೊಲೀಸ್ ಅಧೀಕ್ಷಕರು, ಹಾಸನ ಜಿಲ್ಲೆ<br>4. ಪೊಲೀಸ್ ಅಧೀಕ್ಷಕರು, ಕೊಡಗು ಜಿಲ್ಲೆ | ಮೈಸೂರು |

ಅಭ್ಯರ್ಥಿಗಳು ಹಾಜರಾತಿ ಹಾಳೆಯಲ್ಲಿ ತಿಳಿಸಲಾಗುವ ದಿನಾಂಕ ಮತ್ತು ಕೇಂದ್ರದಲ್ಲಿ ದೇಹದಾರ್ಢ್ಯತೆ ಮತ್ತು ದೈಹಿಕ ಸಾಮರ್ಥ್ಯ ಪರೀಕ್ಷೆಗೆ ಹಾಜರಾಗಬೇಕು. ನಿಗದಿತ ದಿನಾಂಕ ಹಾಗೂ ಸಮಯದಲ್ಲಿ ಹಾಜರಾಗದಿದ್ದರೆ ಆತನನ್ನು ಅನರ್ಹ ಗೊಳಿಸಲಾಗುತ್ತದೆ.

(5ಎ) **ದೇಹದಾರ್ಢ್ಯತೆ:**

**ಎಲ್ಲಾ ಸಾಮಾನ್ಯ ಅಭ್ಯರ್ಥಿ, ಸೇವಾನಿರತ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ ಅನ್ವಯಿಸುವಂತೆ**

(ಎ) ಎತ್ತರ : 168 ಸೆಂ. ಮೀ.

ಎದೆ ಸುತ್ತಳತೆ : 86 ಸೆಂ. ಮೀ (ಪೂರ್ತಿ ವಿಸ್ತರಿಸಿದಾಗ) ಕನಿಷ್ಠ ವಿಸ್ತರಣೆ 5 ಸೆಂ. ಮೀ.

**ಮಹಿಳಾ ಅಭ್ಯರ್ಥಿಗಳಿಗೆ ಅನ್ವಯಿಸುವಂತೆ**

ಎತ್ತರ : 157 ಸೆಂ. ಮೀ.

ತೂಕ : 45 ಕೆ.ಜಿ.

(ಬಿ) **ದೃಷ್ಟಿ:**

ಕನ್ನಡಕ ಸಹಿತ ಅಥವಾ ಕನ್ನಡಕವಿಲ್ಲದೇ ಕೆಳಗೆ ಕಾಣಿಸಿದ ದರ್ಜೆಯ ಸಮೀಪ ಮತ್ತು ದೂರದ ದೃಷ್ಟಿ ಹೊಂದಿರಬೇಕು.

| | ಉತ್ತಮ | | ಕನಿಷ್ಠ |
|---|---|---|---|
| (i) ದೂರದ ದೃಷ್ಟಿ | 6/9 | ಅಥವಾ | 6/9 |
| | 6/9 | | 6/12 |
| (ii) ಸಮೀಪದ ದೃಷ್ಟಿ | 0/6 | | 0/8 |

ಪ್ರತಿ ಕಣ್ಣು ಸಂಪೂರ್ಣ ಕ್ಷೇತ್ರ ದೃಷ್ಟಿ ಹೊಂದಿರಬೇಕು. ವರ್ಣಾಂಧತೆ, ಮೆಳ್ಳಗಣ್ಣು ಅಥವಾ ಯಾವುದೇ ಕಣ್ಣಿನ ಅಥವಾ ರೆಪ್ಪೆಯ ವಿಕೃತ ಸ್ಥಿತಿಯನ್ನು ಅನರ್ಹತೆಯೆಂದು ಪರಿಗಣಿಸಲಾಗುವುದು.

